ಪರಿಸರ ಚಿಂತನೆ - 5

ಹಳ್ಳಿಗಳಲ್ಲಿ ಸುಲಭವಾಗಿ ಬೆಳೆಸಬಹುದಾದ

# ಜನೋಪಯೋಗಿ ಸಸ್ಯಸಂಪತ್ತು

ಲೇಖಕ : ಇ. ವಿಠಲ ರಾವ್, ಕೀನ್ಯಾ

ಪ್ರಕಾಶಕರು:

ನಾಗರಿಕ ಸೇವಾ ಟ್ರಸ್ಟ್ (ರಿ.)

ಗುರುವಾಯನಕೆರೆ - 574 217

ಹಳ್ಳಿಗಳಲ್ಲಿ ಸುಲಭವಾಗಿ ಬೆಳೆಸಬಹುದಾದ

# ಜನೋಪಯೋಗಿ ಸಸ್ಯಸಂಪತ್ತು

ಲೇಖಕ: ಇ. ವಿಠಲ ರಾವ್, 'ಕೃಷಿ ಅನುಭವ ಕೂಟ'
ಅಂಚೆ: ಕೀನ್ಯಾ - 574 156 (ಮಂಗಳೂರು ತಾಲೂಕು)

ಪುಟಗಳು: 4+48



ಪ್ರಕಾಶಕರು:
ನಾಗರಿಕ ಸೇವಾ ಟ್ರಸ್ಟ್ (ರಿ), ಗುರುವಾಯನಕೆರೆ - 574 217 (ದ.ಕ.)

ಸಹಕಾರ:
● ಬೆಳ್ತಂಗಡಿ ತಾಲೂಕು ಪರಿಸರ ಜಾಗೃತಿ ಒಕ್ಕೂಟ
● ದಕ್ಷಿಣ ಕನ್ನಡ ಜಿಲ್ಲಾ ಪರಿಸರಾಸಕ್ತ ಒಕ್ಕೂಟ

| | | |
|---|---|---|
| ಪ್ರಥಮ ಆವೃತ್ತಿ | : | 5-3-1995 |
| ಪ್ರತಿಗಳು | : | 2,000 |
| ಟೈಪ್‌ಸೆಟ್ | : | ಅನುಗ್ರಹ ಲೇಸರ್ ಟೆಕ್, ಬೆಳ್ತಂಗಡಿ - 574 214 |
| ಮುದ್ರಣ | : | ಮಂಜುಶ್ರೀ ಆಫ್‌ಸೆಟ್ ಪ್ರಿಂಟರ್ಸ್, ಉಜಿರೆ - 574 240 |
| ಸೂಚಿತ ದೇಣಿಗೆ | : | ರೂ. 10-00 |

# ಮೊದಲ ಮಾತು

ಇಡೀ ದಕ್ಷಿಣ ಜಿಲ್ಲೆಯ ಭೂ ಪ್ರದೇಶವು ಅತ್ಯಂತ ನವುರಾದ ಜೈವಿಕತೆಯಿಂದ ಕೂಡಿರುವ ಪ್ರದೇಶವಾಗಿದೆ. ವರ್ಷ ಒಂದರೊಳಗೆ ಎರಡು ವ್ಯತಿರಿಕ್ತ ಹವಾಗುಣಕ್ಕೆ ಹೊಂದಿಕೊಂಡು ಜೀವಸಂಕುಲ ಬೆಳೆದು ತಮ್ಮ ಉತ್ಪಾದಕತೆಯನ್ನು ಉಳಿಸಿಕೊಳ್ಳಲು ಬಹುಮುಖ್ಯವಾಗಿರುವ ಒಂದಂಶ ನೀರಿನ ಪೂರೈಕೆ. ಈ ಪ್ರದೇಶದ ಮೇಲ್ಪದರವು ಸಾಕಷ್ಟು ನೀರನ್ನು ಶೇಖರಿಸಲು ಶಕ್ತವಾಗಿರತ್ತದೆ. ಈ ನೀರನ್ನೇ ಬಳಸಿಕೊಂಡು ಜೀವ ಸಂಕುಲವು ತನ್ನ ಉತ್ಪಾದಕತೆಯನ್ನು ಇಮ್ಮಡಿ ಮುಮ್ಮಡಿಯಾಗಿಸಲು ಸಾಧ್ಯವಿದೆ.

ಯಾವುದೇ ಒಂದು ಸಸ್ಯದ ಪೋಷಣೆಗೆ ಮುಖ್ಯವಾಗಿ ನೀರು, ಕಾವು, ಭೂಸಾರ ಹಾಗೂ ಸೌರಶಕ್ತಿಗಳು ಅವಶ್ಯ. ಈ ಜಿಲ್ಲೆಯಲ್ಲಿ ಯಾವುದೇ ಒಂದು ಬೆಳೆ ಉತ್ತಮವಾಗಿ ಬೆಳೆದು ಬರಲು ಬೇಕಾಗುವ ಕಾವು ಮತ್ತು ಸೌರಶಕ್ತಿ ಸಾಕಷ್ಟು ಲಭ್ಯವಿದೆ. ಆದರೆ ಭೂಸಾರ ಸಂಗ್ರಹ ಮತ್ತು ಜಲಶೇಖರಣ ಶಕ್ತಿಯನ್ನು ಕಳೆದುಕೊಂಡರೆ ಉತ್ಪಾದನಾ ಶಕ್ತಿ ಕುಂದುತ್ತದೆ. ಆದ್ದರಿಂದ ಈ ಜಿಲ್ಲೆಯಲ್ಲಿ ಅಗತ್ಯವಾಗಿ ನಿರ್ಮಿಸಬೇಕಾಗಿರುವ ಜೈವಿಕ ವ್ಯವಸ್ಥೆ ಎಂದರೆ 'ಇಕೋ ಫಾರ್ಮಿಂಗ್', 'ಪರ್ಮಾ ಮತ್ತು ಪಾಲಿಕಲ್ಚರ್' (ನೈಸರ್ಗಿಕ ವ್ಯವಸಾಯ, ಶಾಶ್ವತ ಮತ್ತು ಮಿಶ್ರಕೃಷಿ) 'ಪರ್ಮಾ ಮತ್ತು ಪಾಲಿಕಲ್ಚರ್' ಎಂದರೆ ನಿರಂತರವಾಗಿ ಬೆಳೆಯಬಲ್ಲ ವಿವಿಧ ವೃಕ್ಷಸಂಪತ್ತಿನ ಪರಿಪಾಲನೆ. 'ಇಕೋ ಫಾರ್ಮಿಂಗ್' ಎಂದರೆ ನಿಸರ್ಗ ಸಹಜವಾದ ಉತ್ಪಾದನಾ ಶಕ್ತಿಯನ್ನತಿರೇಕಿಸದೆ ಸಸ್ಯಸಂಪತ್ತನ್ನು ವರ್ಧಿಸಿಸುವ ಒಂದು ವಿಧಾನ.

ಈ ಜಿಲ್ಲೆಯ ಒಂದು ವೈಪರೀತ್ಯವೆಂದರೆ ಮಳೆಗಾಲದಲ್ಲಿ 30-40 ದಿನಗಳ ಸತತ ಮಳೆ. ಹೀಗೆ ಸುರಿವ ಮಳೆಯ ವೇಗವನ್ನು ನಿಯಂತ್ರಿಸಿ ಭೂಸಂರಕ್ಷಣೆ ಮಾಡಿ ಮೇಲ್ಪದರದಲ್ಲಿ ಸೇರಿರುವ ಎಲೆ ಗೊಬ್ಬರ ಮೊದಲಾದ ಸಾವಯವ ಪದಾರ್ಥಗಳು ಮಳೆ ನೀರನ್ನು ಹೀರಿಟ್ಟು ಇಂಗಿಸುತ್ತಾ ತನ್ಮೂಲಕ ಭೂ ಜಲ, ಅಂತರ್ಜಲ ಶೇಖರಿಸುವುದು ಒಂದು ಪ್ರಮುಖ ನಿಸರ್ಗ ಸಹಜ ಪ್ರಕ್ರಿಯೆಯಾಗಿರುತ್ತದೆ.

ಧಾರಾಕಾರ ಮಳೆಯ ಆವೇಗವನ್ನು ತಡಕೊಳ್ಳುವ ಶಕ್ತಿ ಮರಗಳಿಗೇ ಸರಿ. ಭೂಮಿಯ ಮೇಲ್ಮೈಯಲ್ಲಿ ತರಗು, ಹ್ಯೂಮಸ್ ಮೊದಲಾದ ಸಾವಯವ ಪದಾರ್ಥಗಳಿರುವುದರಿಂದಲೇ ಮಣ್ಣು ಸುರಕ್ಷಿತವಾಗಿರತ್ತದೆ ಮತ್ತು ಬೇಸಗೆಯಲ್ಲಿ ನೀರು ಆವಿಯಾಗದಂತೆ ತಡೆವ ಶಕ್ತಿ ಹೊಂದಿರುತ್ತದೆ. ಮರಗಿಡಗಳಿದ್ದರೆ ಮಾತ್ರ ಇದು ಸಾಧ್ಯ.

ವನರಾಜಿಯಿರದ ಬಟ್ಟಬಯಲಲ್ಲಿನ ಬೇಸಗೆಯ ಉಷ್ಣಾಂಶ ಅಳೆದರೆ $25^{\circ}$ ಇಂದ $35^{\circ}$ ಸೆಂಟಿಗ್ರೇಡ್ ಇರುವುದಾದರೆ ಅದೇ ವನರಾಜಿಯುಳ್ಳ ಕಡೆ ಕೇವಲ $15^{\circ}$ ಇಂದ $20^{\circ}$ಸೆಂಟಿಗ್ರೇಡ್‌ವರೆಗಷ್ಟೇ ಇರುತ್ತದೆ. ಅರ್ಥಾತ್ ಭೂಮಿಯ ಉಷ್ಣಾಂಶ ಕಾಯ್ದುಕೊಂಡು ಉತ್ಪಾದಕತೆ ಹೆಚ್ಚಿಸಿಕೊಳ್ಳುವ ಸಹಜ ಪ್ರಕ್ರಿಯೆ ಮರಗಿಡಗಳಿಂದಲೇ ಆಗುತ್ತಿದೆ. ಈ ರೀತಿ ವನರಾಜಿಯ ಪಾತ್ರ ಬಲು ಮಹತ್ವದ್ದಾಗಿದೆ.

ಇಲ್ಲಿ ಸ್ಥಳೀಯವಾಗಿ ಬೆಳೆವಂಥ ವಿವಿಧ ಸಸ್ಯೋತ್ಪನ್ನಗಳನ್ನು ನೀಡಬಲ್ಲ ಮರಗಳನ್ನು ಬೆಳೆಸಬೇಕು. ಈ ವಿಧದಲ್ಲಿ 3 ಯಾ 4 ಹಂತಗಳ ಸಸ್ಯ ಸಮೂಹಗಳನ್ನು ಬೆಳೆಸಲು ಸಾಧ್ಯವಿದೆ. ಸೂಚಿತ ಪಟ್ಟಿಯಲ್ಲಿ 289 ಸಸ್ಯಗಳಷ್ಟೇ ಇದ್ದರೂ ನಮ್ಮಲ್ಲಿ ಗುರುತಿಸಿರುವ 1500 ಸಸ್ಯ ಸಮೂಹಗಳಿವೆ. ಈ ಪೈಕಿ 3-4 ಹಂತ ಸ್ವಾಭಾವಿಕವಾಗಿ ಬೆಳೆಯಬಹುದಾದ ಸಸ್ಯಗಳು ಬಹಳಷ್ಟಿವೆ. ಅದರಲ್ಲೂ ಮುಖ್ಯವಾಗಿ ಗೆಡ್ಡೆಗೆಣಸುಗಳನ್ನು ಒದಗಿಸುವ ಸಸ್ಯಗಳೂ ಇರುವುದರಿಂದ ಅವುಗಳನ್ನು ಬೆಳೆಸುವ ವಿಧಿ ವಿಧಾನಗಳ ಕಡೆಗೂ ಗಮನ ಹರಿಸಬೇಕಾದ್ದು ಅಗತ್ಯ. ನೆಲದಲ್ಲಿ ಸುಮಾರು 3 ರಿಂದ 5 ಅಡಿ ಆಳದೊಳಗೆ ವಿಧವಿಧ ಗಡ್ಡೆ ಗೆಣಸುಗಳನ್ನು ಬೆಳೆಸಬಹುದು. ಸುಮಾರು 30ರಷ್ಟು ವಿವಿಧ ಗಡ್ಡೆ ಗೆಣಸುಗಳನ್ನು ಆಹಾರವಾಗಿ ಬಳಸಲಾಗುತ್ತಿದೆ. ಇಂದಿಗೂ ಕುರುಬರು, ಕೊರಗರೇ ಮೊದಲಾದ ಗಿರಿಜನರನೇಕರು ಗಡ್ಡೆಗೆಣಸುಗಳನ್ನೇ ಆಹಾರವಾಗಿ ಬಳಸುತ್ತಿರುವುದನ್ನು ಕಾಣಬಹುದಾಗಿದೆ. ಭೂಮಿಯೊಳಗೆ ಐದಾರಡಿಗಳ ಅಂತರದಲ್ಲಿ ಇಂತಹ ಅಮೂಲ್ಯವಾದ ಆಹಾರವನ್ನ ಯಾವುದೇ ರಸಗೊಬ್ಬರ ರಾಸಾಯನಿಕ ಪಿಡುಗುನಾಶಿಗಳನ್ನು ಬಳಸದೆ ಬೆಳೆಸಬಹುದಾಗಿದೆ. ಇವು ಭತ್ತ ಗೋಧಿಗಳಂತಹ ಧಾನ್ಯಾಹಾರಗಳಷ್ಟೇ ಪುಷ್ಟಿಕರವಾಗಿವೆ. ಹೀಗೇ ಭೂಮಿಯ ಹೊರಮೈಯಲ್ಲಿ ನಾಕಡಿ ಹತ್ತಡಿ ಇಪ್ಪತ್ತಡಿ ಮೂವತ್ತಡಿ ಎತ್ತರದ ವಿವಿಧ ಸ್ತರಗಳಲ್ಲಿ ಸುಮಾರು 60ರಿಂದ 100 ಅಡಿ ಎತ್ತರದವರೆಗೂ ಹಂತ ಹಂತವಾಗಿ ವಿವಿಧ ಸಸ್ಯ ಸಮೂಹಗಳ ನಿರ್ಮಾಣ ಸಾಧ್ಯವಿದೆ. ಎಲ್ಲಾ ಹಂತಗಳಲ್ಲೂ ಸಹ ನಮಗೆ ಬೇಕಾಗುವ ವಿವಿಧ ಗಿಡಮೂಲಿಕೆ, ಸುಗಂಧ ದ್ರವ್ಯಗಳು, ಹಣ್ಣು, ಕಾಯಿ, ಬೀಜ ಮತ್ತು ಆಹಾರಾದಿಗಳಿಗಾಗಿ ಬಳಸುವ ವಸ್ತುಗಳನ್ನು ಉತ್ಪಾದಿಸುವ ಸಸ್ಯ ಸಮೂಹಗಳನ್ನು ಇದರೊಂದಿಗೆ ಬೆಳೆಸಲು ಸಾಧ್ಯವಿದೆ.

ಈ ಒಂದು ವ್ಯವಸ್ಥೆಯು ಸರ್ವ ಸೌರಶಕ್ತಿಯನ್ನುಪಯೋಗಿಸಿಕೊಂಡು ಶ್ರೇಷ್ಠ ರಾಸಾಯನಿಕ ಹಾಗೂ ನಿಸರ್ಗದತ್ತ ವಸ್ತುಗಳನ್ನುತ್ಪಾದಿಸುವ ಅದ್ಭುತ ಕಾರ್ಯಾಚರಣೆಯಾಗುತ್ತದೆ.

ಅಂಕಿ ಅಂಶಗಳಿಂದ ಸಮರ್ಥಿಸಲ್ಪಟ್ಟಿರುವಂತೆ ಭೂಮಿಯು ಹೆಕ್ಟಾರೊಂದರ 1.8 ಮೆಟ್ರಿಕ್ ಟನ್ ನೀರನ್ನು ಹಿಡಿದಿಟ್ಟುಕೊಳ್ಳುವ ಸಾಮರ್ಥ್ಯ ಹೊಂದಿರುತ್ತದೆ. ಹೀಗೆ ಶೇಖರಿಸಿರುವ ನೀರನ್ನು ಮಳೆಯಾಗದ ಕಾಲದಲ್ಲಿ ಸಸ್ಯಗಳಿಗೊದಗಿಸಿ ವಿವಿಧ ಫಲ ಮತ್ತು ಇಂಧನಾದಿಗಳನ್ನುತ್ಪಾದಿಸುವ ಚೈತನ್ಯ ನೀಡುತ್ತದೆ. ಇಲ್ಲಿ ಪ್ರಾಸ್ತಾಪಿಸಲ್ಪಟ್ಟಿರುವಂತೆ ಬಹಳಷ್ಟು ಜನ ಅದರಲ್ಲೂ ಗ್ರಾಮೀಣ ಪ್ರದೇಶದ ಮಂದಿ ಮರಮಟ್ಟು ಹಾಗೂ ಜೀವನಾವಶ್ಯಕ ಆಹಾರಾದಿ ಇತರ ವಸ್ತುಗಳಿಗೆ ಈ ನಿಸರ್ಗ ಸಂಪನ್ಮೂಲಗಳನ್ನೇ ಅವಲಂಬಿಸಿರುತ್ತಾರೆಂಬುದು ಸತ್ಯ. ಪ್ರಸ್ತಾಪಿಸಿದ ಹಾಗೆ ಅದರಲ್ಲೂ ಗ್ರಾಮೀಣ ಮಹಿಳೆಯರು ಇಂಥ ಸಂಪನ್ಮೂಲ ವಿನಾಶದಿಂದ ಅಪಾರ ಕಷ್ಟ ಕಾರ್ಪಣ್ಯಗಳಿಗೊಳಗಾಗಿದ್ದಾರೆ. ಉದಾ: ಬೈಂದೂರು, ಕುಂದಾಪುರ ಪ್ರದೇಶಗಳಲ್ಲಿನ ನೂರಾರು ಹೆಂಗಳೆಯರು ಉರಿ ಬಿಸಿಲಲ್ಲಿ ಐದಾರು ಕಿಲೋಮೀಟರು ದೂರ ಗುಡ್ಡಗಾಡುಗಳನ್ನು ಸುತ್ತಿ ಬರುತ್ತಿರುವುದನ್ನು ಕಂಡಾಗ ನಮ್ಮ 'ಯೋಜನೆ'ಗಳು ಅದಾವ ರೀತಿ ಕಾರ್ಯಸಾಧ್ಯವಾಗುತ್ತಿಲ್ಲ ಎಂಬ ಸ್ಪಷ್ಟ ಚಿತ್ರ ಕಂಡು ಬರುತ್ತಿದೆ. ಬಹುಪಾಲು ಗ್ರಾಮೀಣ ಜನರು ಸಾಂಪ್ರದಾಯಿಕವಲ್ಲದ ಇಂಧನಮೂಲಗಳನ್ನು ಅವಲಂಬಿಸಿರುತ್ತಾರೆ. ಆದರೆ ನಮ್ಮ ಪಂಚವಾರ್ಷಿಕ ಯೋಜನೆಗಳು ಇದುವರೆಗೂ ಶೇಖಡಾ 60ರಿಂದ 70ರಷ್ಟು ಹಣವನ್ನು ಕೇವಲ ಸಾಂಪ್ರದಾಯಿಕ ಇಂಧನಗಳ ಉತ್ಪಾದನೆಗಾಗಿ ವೆಚ್ಚಮಾಡುತ್ತಲೇ ಬಂದಿವೆ. ಇಲ್ಲಿ ಸೂಚಿತವಾಗಿರುವಂತೆ ನೈಸರ್ಗಿಕ

ಸಂಪನ್ಮೂಲಗಳ ಅಡೆತಡೆಯಿಲ್ಲದ ಬಳಕೆಯಿಂದ ಇಂದು ದ.ಕ. ಜಿಲ್ಲೆಯ 30ರಿಂದ 40ರಷ್ಟು ಶೇಕಡಾ ಭೂಭಾಗ ಬೋಳಾಗಿದೆ. ಪರಿಣಾಮವಾಗಿ ಮೇಲ್ಪದರ ಮುರವಾಗಿ ಪರಿಣಮಿಸಿ ಹುಲ್ಲು ಕಡ್ಡಿ ಕೂಡ ಬೆಳಯದಂತಾಗಿದೆ. ಉದಾಹರಣೆಗೆ ಬೈಂದೂರು, ಕುಂದಾಪುರ ಪ್ರದೇಶಗಳಲ್ಲಿನ ಕಾಚಿನ ಮರ (ಖದಿರ = ಅಕೇಸಿಯ ಕಟೆಚು). ಶ್ರೀಗಂಧದಂತೆಯೇ ಮಹತ್ವಪೂರ್ಣವಾದ ಈ ಮರಗಳನ್ನು ಸವರಿ ಮುಗಿಸಿದ್ದರಿಂದ ಈ ಊರ ಮಂದಿ ಕೈಗೊಳ್ಳಬಹುದಾಗಿದ್ದ ಗುಡಿಕೈಗಾರಿಕೆಗೂ ಅವಕಾಶವಿಲ್ಲದಂತಾಗಿದೆ. ಜನ ಉತ್ತಮ ಉದ್ಯೋಗಾವಕಾಶದಿಂದ ವಂಚಿತರಾಗಿದ್ದಾರೆ.

ನಿಸರ್ಗದಲ್ಲಿ ಖರ್ಚಿಲ್ಲದೆ ತಾನಾಗಿ ಬೆಳೆಯುತ್ತ ಬರುವ ಸಸ್ಯ ಸಮೂಹ ನಾಶದಿಂದ ಉಂಟಾಗಿರುವ ತೊಂದರೆಗಳ ಕುರಿತಾಗಿ ಸ್ಥಳೀಯ ಹಿರಿಯರು ತಮ್ಮದೇ ಅನುಭವದಿಂದ ಇಂಥ ನೂರಾರು ಉದಾಹರಣೆಗಳನ್ನು ನೀಡಬಲ್ಲರು. ಆದ್ದರಿಂದ ನಮ್ಮ ನೈಸರ್ಗಿಕ ಸಂಪನ್ಮೂಲಗಳನ್ನು ಉಳಿಸಿ ಬೆಳೆಸಿ ಬಳಸಿಕೊಳ್ಳುವ ವಿಧಿ ವಿಧಾನಗಳನ್ನು ಹಾಗೂ ಈ ಸಂಪನ್ಮೂಲಗಳ ಪುನರುತ್ಥಾನಕ್ಕಗತ್ಯವಾಗುವ ತಾಂತ್ರಿಕತೆಗಳನ್ನು ಅಳವಡಿಸಿಕೊಂಡಲ್ಲಿ ಬಹಳಷ್ಟು ಗ್ರಾಮೀಣ ಜನಗಳಿಗೆ ಉದ್ಯೋಗಾವಕಾಶವಾಗುವುದಲ್ಲದೆ ಈ ಪ್ರದೇಶದವರ ಬಡತನ ನಿವಾರಣೆಗೂ ಒಂದಿಷ್ಟು ನೆರವಾದೀತೆಂಬುದು ನನ್ನ ಅನಿಸಿಕೆ.

ಅರ್ಥಾತ್ ನಮ್ಮ ಪ್ರತಿಯೊಂದು ಯೋಜನೆಯನ್ನೂ ಸರಕಾರವೇ ಕಾರ್ಯರೂಪಕ್ಕೆ ತರುವುದು ಬಲು ಕಷ್ಟ. ಈಗ ಇರುವ ಕಾಯಿದೆಯ ಪ್ರಕಾರ ಜಂಟಿ ಅರಣ್ಯ ಯೋಜನೆಯಡಿಯಲ್ಲಿ ನಿರ್ವಹಣೆಯ ಜವಾಬ್ದಾರಿ ಗ್ರಾಮಾರಣ್ಯ ಸಮಿತಿಯದ್ದಾಗಿದೆ. ಈ ಅವಕಾಶವನ್ನು ಸದುಪಯೋಗಪಡಿಸಿಕೊಂಡು ನಿಸರ್ಗ ಸಂಪತ್ತನ್ನು ಉಳಿಸಿ ಬೆಳೆಸಿ ಬಳಸಿಕೊಳ್ಳುವ ವಿಧಿ ವಿಧಾನ ನೀತಿ ನಿಯಮಾದಿಗಳನ್ನು ಸ್ಥಳೀಯರೇ ಅರಿತು ರೂಪಿಸಿ ಅನುಭವಿಸುವವರಾಗಬೇಕು.

ಈ ಪರ್ವಕಾಲದಲ್ಲಿ ಗ್ರಾಮೀಣ ಪರಿಸರಾಸಕ್ತ ಜನತೆಗೆಲ್ಲ ಉಪಯುಕ್ತವಾಗಬಲ್ಲ ಈ ಪುಟ್ಟ ಕೈಪಿಡಿಯನ್ನು ರಚಿಸಿಕೊಟ್ಟಿರುವ ಸಾವಯವ ಕೃಷಿಕ ಇ. ವಿಠಲ್ ರಾವ್ ಹಾಗೂ ಪ್ರಕಟಿಸಿ ಜನರಿಗೊದಗಿಸುತ್ತಿರುವ ಗುರುವಾಯನಕೆರೆಯ ನಾಗರಿಕ ಸೇವಾ ಟ್ರಸ್ಟ್ (ರಿ) ಇವರ ಪರಿಶ್ರಮ ಅಭಿನಂದನಾರ್ಹ.

ಆ. ನ. ಯಲ್ಲಪ್ಪ ರೆಡ್ಡಿ

ಕರ್ನಾಟಕ ಸರಕಾರದ ವಿಶೇಷ ಕಾರ್ಯದರ್ಶಿ

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

ತಾ. 14-1-95

# ಗ್ರಾಮೀಣ ಜನಹಿತ ಅರಣ್ಯ ಮಾಹಿತಿ- ಒಂದು ನೋಟ

ಈ ಭೂಮಿ ಮಾನವಕೋಟಿಗೆ ಬದುಕಲು ಯೋಗ್ಯವಾಗಿ ರೂಪುಗೊಳ್ಳುವ ಕೋಟ್ಯಾಂತರ ವರ್ಷಗಳ ಮುನ್ನವೇ ಏಕಾಣು ಜೀವಿಗಳು, ಹಾವಸೆ, ಜರಿಗಿಡ ಮುಂತಾದ ಸಸ್ಯ ವರ್ಗ ಇಲ್ಲಿ ಕಾಣಿಸಿಕೊಂಡವು. ಆವಾಗ ಭೂಮಿಯ ಸುತ್ತಮುತ್ತಲಿನ ವಾತಾವರಣದಲ್ಲಿ ಮೀಥೇನ್, ಗಂಧಕದ ಡೈ ಆಕ್ಸೈಡ್, ಇಂಗಾಲದ ಡೈಆಕ್ಸೈಡ್ ಮುಂತಾದ ವಾಯುಗಳು ಅಧಿಕ ಪ್ರಮಾಣದಲ್ಲಿದ್ದ ಕಾರಣ ಮಾನವ ಬದುಕಲು ಸಾಧ್ಯವಾಗುವ ಸ್ಥಿತಿ ಇರಲಿಲ್ಲ. ಆದರೆ ಹಲವು ಜಾತಿಯ, ಹರಿತ್‌ನಿಂದ ಕೂಡಿದ (ಹಸಿರು ಎಲೆಗಳುಳ್ಳ) ಮರಗಳು ವಾತಾವರಣವನ್ನು ಹದಗೊಳಿಸಿ ಈ ಭೂಮಿಯನ್ನು ಕ್ರಮೇಣ ಮನುಷ್ಯರ ವಾಸಕ್ಕೆ ತಕ್ಕುದಾಗಿ ಮಾಡಿದವು. ನಂತರ ಮಾನವ ಕಾಣಿಸಿಕೊಂಡು ಲಕ್ಷಾಂತರ ವರ್ಷಗಳು ಕಾಡಿನೊಳಗೇ, ಅದರ ಆಶ್ರಯದಲ್ಲಿಯೇ ದಿನ ಕಳೆಯುತ್ತ ಬಂದ.

ಇಂದಿನ ಕೈಗಾರಿಕಾ ಯುಗ (ಸುಮಾರು 300 ವರ್ಷಗಳಿಂದೀಚೆ) ಆರಂಭವಾದಾಗಿನಿಂದ ಸಾಮಾನ್ಯ ಜನರಿಗೆ ಕಾಡಿನ ಸಂಪರ್ಕ ಕಡಿಮೆಯಾಗುತ್ತಾ ಬಂದಿತು. ನಗರಗಳು ಬೆಳೆಯುತ್ತಾ ಹೋದವು. ಈಗ ನಾಗರೀಕತೆಯೆಂದರೆ ಪಟ್ಟಣಗಳಲ್ಲಿ ವಾಸಿಸುತ್ತ, ಮಾನವಕಲ್ಪಿತ ಕೃತಕ ವಸ್ತುಗಳ ಸ್ವೇಚ್ಛಾ ಬಳಕೆ ಎಂಬ ಬುದ್ಧಿಭ್ರಮಣೆಯಿಂದ ಕಾಡುಗಳನ್ನೂ, ಮರ ಗಿಡಗಳನ್ನೂ, ತನ್ನ ಅತಿ ಆಶೆಗಳ ಪೂರೈಕೆಗೆ, ಕೃತಕ ವಸ್ತುಗಳ ತಯಾರಿಕೆಗೆ ಮಾನವ ಧ್ವಂಸ ಮಾಡುತ್ತಾ ಬಂದ. ಈಗ ತಾನೇ ವಿನಾಶದ ಅಂಚನ್ನು ಮುಟ್ಟಿರುತ್ತಾನೆ. ಈ ನಡುವೆ ವಿವೇಚನೆಯುಳ್ಳ ದೂರದೃಷ್ಟಿಯ ಮಹಾತ್ಮರು ಕಾಡು ನಾಶವಾದರೆ ನಾಡು ಉಳಿಯದು ಎಂದು ತಿಳಿದು ಕಾಡುಗಳನ್ನುಳಿಸಲು-ಬೆಳೆಸಲು ಬೋಧಿಸುತ್ತಿದ್ದರು. ಇಂದು ಇದರ ಸತ್ಯ ವಿಜ್ಞಾನಿಗಳಿಗೂ, ನಿಸ್ವಾರ್ಥ ರಾಜಕಾರಣಿಗಳಿಗೂ, ಉದ್ಯಮಪತಿಗಳಿಗೂ ಅರ್ಥವಾಗಿರುತ್ತದೆ. ಈಗ ಕಾಡುಗಳನ್ನೂ, ಮರ ಗಿಡಗಳನ್ನೂ ಬೆಳೆಸುವ ಮತ್ತು ಮಿತವಾಗಿ ಬಳಸುವ ತಂತ್ರಜ್ಞಾನ (ಬೇಕೆಂದು ಹುಡುಕುವವರಿಗೆ) ದೊರಕುತ್ತದೆ.

ಈ ಭೂಮಿಯ ಮೇಲೆ 12 ಪ್ರದೇಶಗಳನ್ನು ಜೀವ ವೈವಿಧ್ಯತೆಯ ಆಗರಗಳೆಂದೂ ಗುರುತಿಸಲಾಗಿದೆ. ಇವುಗಳಲ್ಲಿನ ವೈವಿಧ್ಯವನ್ನು ಕಾಪಾಡಿಕೊಂಡು ಬರುವುದು ಮಾನವಕುಲದ ಉಳಿವಿಗೆ ಅನಿವಾರ್ಯವೆಂದೂ ವಿಜ್ಞಾನಿಗಳು ಒಪ್ಪಿಕೊಂಡಿರುತ್ತಾರೆ. ಭಾರತದ ಪಶ್ಚಿಮ ಘಟ್ಟ ಪ್ರದೇಶವೂ ಸಹ ಈ ರೀತಿಯಲ್ಲಿ (ಮಾನವನ ಉಳಿವಿಗೆ ಆಗತ್ಯವಾದ) ಜೀವ ವೈವಿಧ್ಯತೆ ಹೊಂದಿರುವ ಪ್ರದೇಶಗಳ ಪೈಕಿ ಒಂದೆಂದು ಗುರುತಿಸಲಾಗಿದೆ. ಹಾಗೆಂದ ಮೇಲೆ ಪಶ್ಚಿಮ ಘಟ್ಟಗಳಲ್ಲಿ ವಾಸಿಸುವ ಜನರು, ನಾವು, ಈ ಪ್ರದೇಶದ ಜೀವ ವೈವಿಧ್ಯತೆಯನ್ನು ಕಾಪಾಡಿಕೊಂಡು ಬರುವ ಹೊಣೆ ನಮ್ಮ ಹೆಮ್ಮೆಯ ಕರ್ತವ್ಯವೆಂದು ಸಹ ತಿಳಿದುಕೊಳ್ಳಬೇಕು. ಈ ವಲಯದಲ್ಲಿ ಬೆಳೆಯುವ ಮರಗಳು, ಗಿಡಮೂಲಿಕೆಗಳು, ಪ್ರಾಣಿ-ಪಕ್ಷಿಗಳು ಮಾನವರ ಹೆಚ್ಚಿನ ಆಗತ್ಯತೆಗಳನ್ನು ಪೂರೈಸಬಲ್ಲವು. ಈ ವನಸಿರಿಯಿಂದ ನಮಗೆ ಏನೆಲ್ಲಾ ಸಿಗಬಹುದು ಎಂಬ ಜ್ಞಾನ ಸಂಗ್ರಹ ಕೆಲಸ ಶಾಲಾ ಮಕ್ಕಳಿಗೆ ಒಂದು ಕುತೂಹಲಕಾರಿ ಹವ್ಯಾಸವಾಗಿ ಬೆಳೆದರೆ ಕ್ರಮೇಣ ಬಹಳ ವಿಷಯ ಸಂಗ್ರಹವಾದೀತು. ಈಗಾಗಲೇ ಬಹಳಷ್ಟು ವಿಷಯ ಜ್ಞಾನ ಕಳೆದು ಹೋಗಿರಬಹುದಾದರೂ, ಮೂಲೆ ಮೂಲೆ ಹಳ್ಳಿಗಳಲ್ಲಿ ಮತ್ತು ವನವಾಸಿ ಜನಾಂಗಗಳಲ್ಲಿ, ಮುದುಕರಲ್ಲಿ ಇನ್ನೂ ಕಾಡುಗಳ ವಿಚಾರವಾಗಿ ಉಳಿದಿರುವ ಸಾಂಪ್ರದಾಯಿಕ ಜ್ಞಾನವನ್ನು ಸಂಗ್ರಹಿಸಲು ಎಲ್ಲರೂ ಶ್ರಮಿಸಿದರೆ ಕಾಡುಗಳು

ನಮಗೆ ಮಾಡುವ ಉಪಕಾರವನ್ನು ಗುರುತಿಸುವುದಲ್ಲದೆ, ಮುಂದಿನ ಜನಾಂಗಕ್ಕೆ ಬಹಳ ಉಪಕಾರವಾದೀತು.

ಕಾಯಿ ತರಕಾರಿ, ಎಲೆ ತರಕಾರಿ, ಹುಳಿ ಪದಾರ್ಥಗಳು, ಹಣ್ಣು, ಎಣ್ಣೆ ಕಾಳು ಬೇಳೆಗಳು, ಗಡ್ಡೆ ಗೆಣಸು, ಸಿಹಿ ವಸ್ತುಗಳು, ಮದ್ದುಗಳು, ಕ್ರಿಮಿನಾಶಕಗಳು, ಉರುವಲು, ಆತ್ಮರಕ್ಷಣೆಗೆ ಬೇಕಾಗುವ ಹತ್ಯಾರು, ಬೇಲಿ ಸಾಮಾಗ್ರಿ, ಮನೆ ಕಟ್ಟಲು ಸಾಮಾನು, ಶರೀರದ ಕೊಳೆ ತೆಗೆಯುವ ವಸ್ತುಗಳು, ಬಟ್ಟೆ, ನಾರು, ಸುವಾಸನೆ ದ್ರವ್ಯಗಳು ಮುಂತಾದ ಬೇರೆ ಬೇರೆ ಶೀರ್ಷಿಕೆಗಳ ಅಡಿಯಲ್ಲಿ ಕಾಡಿನ ಗಿಡಗಳನ್ನು ಮಕ್ಕಳು ಗುರುತಿಸುವಂತೆ ಮಾಡಿದರೆ ನಮ್ಮ ವೃಕ್ಷ ಸಂಪತ್ತಿನ ವೈವಿಧ್ಯತೆ ಮಕ್ಕಳಿಗೆ ಅರ್ಥವಾದೀತು. ಆಗ ಅವರೇ ಮರ ಗಿಡಗಳ ರಕ್ಷಕರಾಗುವಲ್ಲಿ ಸಂಶಯವಿಲ್ಲ.

ಭಾರತ ದೇಶ ಬ್ರಿಟೀಷರ ವಸಾಹತು ಆಗಿದ್ದಾಗ ಈ ದೇಶದ ಕಾಡು ಉತ್ಪತ್ತಿಯೆಂದರೆ ಅದರಲ್ಲಿರುವ ಒಳ್ಳೆ ಜಾತಿಯ ಮೋಪಿನ ಮರಗಳೆಂದು ಅವರು ಭಾವಿಸಿದ್ದರೆ ಚೋದ್ಯವಲ್ಲ. ಆದರೆ ಅದೇ ದೃಷ್ಟಿಯನ್ನು ಸ್ವಾತಂತ್ರ್ಯ ಬಂದ ಮೇಲೂ ಸಹ ನಮ್ಮ ರಾಜಕಾರಣಿಗಳೂ, ಉದ್ಯಮಪತಿಗಳೂ ನಗರವಾಸಿಗಳೂ ಮುಂದುವರಿಸಿಕೊಂಡು ಬಂದದ್ದು ಬಹಳ ದುಃಖದ ಸಂಗತಿ. ಸತ್ಯಸಂಗತಿಯೆಂದರೆ ಮರ ಗಿಡಗಳು ಮತ್ತು ಅವುಗಳ ಎಲೆಗಳ ಹರಿತ್ತಿನ ಚಮತ್ಕಾರದಿಂದ ಮಾನವ ಈ ಲೋಕದಲ್ಲಿ ಬದುಕಿ ಬಾಳುತ್ತಿದ್ದಾನೆ. ಮಾನವರಿಲ್ಲದಿದ್ದರೆ ಮರಗಳು ಉಳಿಯಲು ತೊಂದರೆ ಆಗಲಾರದು. ಆದರೆ ಮರ ಗಿಡಗಳಿಲ್ಲದಿದ್ದರೆ ಮಾನವ ಖಂಡಿತಾ ಉಳಿಯಲಾರ. ನಾವು ಈ ದೇಶದಲ್ಲಿ ಉಳಿಯಬೇಕಾದರೆ ಕಾಡುಗಳ ವೈವಿಧ್ಯತೆಯನ್ನು ಉಳಿಸಬೇಕು. ಸೌರಶಕ್ತಿಯನ್ನು ಹಿಡಿದಿಟ್ಟು ಮಾನವರ ಉಪಯೋಗಕ್ಕೆ ಒದಗಿಸುವ ಏಕೈಕ ವಸ್ತುವೇ ಮರಗಳು. ಇದನ್ನೆಲ್ಲ (ಬಹಳ ತಡವಾಗಿ ಆದರೂ) ಈಗ ನಮ್ಮ ಸರಕಾರ ತಿಳಿದು ಕೊಂಡಿದೆ. ಹೀಗಾಗಿ ಜಂಟಿ ಅರಣ್ಯ ಯೋಜನೆ ಮತ್ತು ನಿರ್ವಹಣೆ (ಜೆ.ಎಫ್.ಪಿ.ಎಂ.) ಕಾರ್ಯ ಯೋಜನೆ ಎಂಬ ಹೊಸ ಯೋಜನೆಯ ಮುಖಾಂತರ ನಮ್ಮ ಸರಕಾರ ಗ್ರಾಮೀಣ ಜನರಿಗೆ ಪುನಃ ಕೆಲವು ನಮೂನೆಯ (ವರ್ಗದ) ಕಾಡುಗಳನ್ನು ಮತ್ತು ಭೂ ಪ್ರದೇಶಗಳನ್ನು ಅವರ ಸ್ವಂತ ಉಪ ಯೋಗಕ್ಕೆ ಬೇಕಾಗುವ ಮರ ಮಟ್ಟುಗಳನ್ನು ಅರಣ್ಯ ಇಲಾಖೆಯ ಸಹಯೋಗದಿಂದ ಬೆಳೆಸಲು, ಬಳಸಲು, ಅವಕಾಶ ಕಲ್ಪಿಸಿರುತ್ತಾರೆ. ಆದರೆ ಇಲ್ಲಿನ ಮಣ್ಣನ್ನು ಕೆದಕುವಂತಿಲ್ಲ. ಹೀಗೆ ಅಧಿಕೃತವಾಗಿ ಗ್ರಾಮೀಣ ಜನರ ಅಭ್ಯುದಯಕ್ಕೆ ಪುನಃ ಒಂದು ಅವಕಾಶ ಸಿಕ್ಕಿರುತ್ತದೆ. ಇದನ್ನು ಗ್ರಾಮಸ್ಥರು ಹೇಗೆ ಸದುಪಯೋಗ ಪಡಿಸಿಕೊಳ್ಳಬಹುದು ಎಂಬುದೇ ಈ ಚಿಕ್ಕ ಕೈಪಿಡಿಯ ಉದ್ದೇಶವಾಗಿರುತ್ತದೆ.

ಕಾಡಿನಲ್ಲಿ ಬೀಜ ಪ್ರಸಾರ ಹಲವು ರೀತಿಯಲ್ಲಿ ನಡೆಯುತ್ತಿರುತ್ತದೆ. ಗಾಳಿ ಮತ್ತು ಹರಿಯುವ ನೀರು ಕೆಲವು ಬೀಜಗಳನ್ನು ಹರಡಿದರೆ ಇನ್ನೂ ಹಲವು ಗಿಡಗಳ ಬೀಜ ಪ್ರಸಾರ ಪ್ರಾಣಿ, ಪಕ್ಷಿ, ಮಾನವ ಮುಂತಾದ ಚರ ಪ್ರಾಣಿಗಳಿಂದ ಆಗುತ್ತದೆ. ಹಣ್ಣುಗಳು ಮಾಗಿ ನೆಲಕ್ಕೆ ಉರುಳಿದ ಫಲ, ಪೈರನ್ನು ತಿನ್ನುತ್ತ, ಅವುಗಳನ್ನು ಅಲ್ಲಲ್ಲಿ ಚದುರಿಸಿ, ಬೀಜ ಪ್ರಸಾರಕ್ಕೆ ಜೀವಿಗಳು ಸಹಕರಿಸುತ್ತವೆ. ಇನ್ನೂ ಅನೇಕ ಜಾತಿಯ ಬೀಜಗಳು ಪ್ರಾಣಿಗಳ ಮೈಗೆ, ಕೂದಲಿಗೆ ಅಂಟಿಕೊಂಡು ಎಲ್ಲಿಯೋ ಇನ್ನೊಂದು ಕಡೆ ಉದುರುವ ಮೂಲಕ ಪ್ರಸಾರಗೊಳ್ಳುತ್ತವೆ. ಇನ್ನು ಕೆಲವು ಬೀಜಗಳು ಮಾಗು

ವಾಗ ಸಿಡಿದು ದೂರಕ್ಕೆ ಎಸೆಯಲ್ಪಡುತ್ತವೆ. ನೆಲಕ್ಕೆ ಉರುಳಿ ಪ್ರಾಣಿಗಳ ಚಲನವಲನದಿಂದ ಚೆಲ್ಲಾಡಲ್ಪಡುತ್ತದೆ. ಇನ್ನು ಕೆಲವು ಬೀಜಗಳು ಪ್ರಾಣಿಗಳ ಹೊಟ್ಟೆ ಸೇರಿ ಜಠರ ರಸಗಳ ಕ್ರಿಯೆಗೆ ಒಳಪಟ್ಟು ಮಲದಲ್ಲಿ ವಿಸರ್ಜಿಸಲಾದಾಗ ಮಾತ್ರ ಹುಟ್ಟಿಕೊಳ್ಳುತ್ತದೆ. ಕೆಲವು ಬೀಜಗಳು ಚೆನ್ನಾಗಿ ಮಳೆಗಾಲ ಆರಂಭವಾದ ಮೇಲೆಯೇ ತಾಯಿಮರದಿಂದ ಬೇರ್ಪಟ್ಟು ನೆಲಕ್ಕೆ ಬೀಳುವುದರಿಂದ ಮುಂದೆ ಜೀವಿಸಲು ಅನುಕೂಲ ಮಾಡಿಕೊಳ್ಳುತ್ತವೆ. ಕೆಲವು ಸಸಿಗಳು ರೆಂಬೆಗಳಿಂದ, ಎಲೆಗಳಿಂದ ಮತ್ತು ಬೇರುಗಳಿಂದ ಸಸಿಗಳನ್ನು ಉತ್ಪತ್ತಿ ಮಾಡಿ ವೃದ್ಧಿಯಾಗುತ್ತವೆ. ಕೆಲವು ಬೀಜಗಳು ಹುತ್ತಗಳ ಒಳಗೆ ಬಿದ್ದು ಯಾ ಇಲಿ ಮುಂತಾದ ಪ್ರಾಣಿಗಳ ಬಿಲ ಸೇರಿ, ಕಾಡುಕಿಚ್ಚನ್ನು ಸಹ ಎದುರಿಸಿ ನಂತರ ಅನುಕೂಲ ವಾತಾವರಣ ಉಂಟಾದಾಗ ಹುಟ್ಟಿಕೊಳ್ಳುತ್ತವೆ. ಹೀಗೆ ಕಾಡಿನಲ್ಲಿ ಸಂಭವಿಸುವ ಎಲ್ಲ ಅವಘಡಗಳಿಂದ ಮರಗಿಡಗಳು ಚೇತರಿಸಿಕೊಳ್ಳುವ ಅವಕಾಶಗಳನ್ನು ಹಲವು ರೀತಿಯಲ್ಲಿ ಪ್ರಕೃತಿ ಕಲ್ಪಿಸುತ್ತದೆ. ಆದರೆ ಆಧುನಿಕ ಕೈಗಾರಿಕೆಗಳ ಧಾಳಿಯನ್ನು ತಡೆಯಲು ಮಾತ್ರ ಲಕ್ಷಾಂತರ ವರ್ಷಗಳಿಂದ ಉಳಿದು ಬಂದ ಮತ್ತು ಮಾನವರಿಗೂ ಆಶ್ರಯ ನೀಡಿದ ಕಾಡು ಈಗ ಮಾನವರ ಮೊರೆಹೊಕ್ಕ ಬೇಕೆನ್ನುತೀರಾ ? ಇಲ್ಲ.

ಮಾನವ ಎಂದೂ ಅಬಲ. ವಾಯು ಮಂಡಲದಲ್ಲಿನ ಸಾರಜನಕ, ಆಮ್ಲಜನಕ ಹಾಗೂ ಇಂಗಾಲದ ಡೈ ಆಕ್ಸೈಡ್ ಅನಿಲಗಳ ಸಮತೋಲನ ಅತಿ ಅಲ್ಪ ಪ್ರಮಾಣದಲ್ಲಿ ಹೆಚ್ಚು ಕಡಿಮೆ ಆದರೂ ಮಾನವ ಕುಲ ನಾಶವಾಗುತ್ತದೆ. ಈಗ ಈ ಸಮತೋಲನ ಕೆಡದಂತೆ ಕಾಪಾಡಿಕೊಂಡು ಬರುತ್ತಿರುವುದು ವೃಕ್ಷಗಳೇ. ಮರಗಿಡಗಳಿಲ್ಲವಾದರೆ ಮಳೆ ಇಲ್ಲ, ಹರಿಯುವ ನೀರಿಲ್ಲ, ಇಂಧನ ಇಲ್ಲ, ಆಹಾರ ಇಲ್ಲ ಎಂದ ಮೇಲೆ ಮಾನವ ಹೇಗೆ ಉಳಿದಾನು ?

ಮರಗಳು ಸಮಾಜ ಜೀವಿಗಳು. ಇದನ್ನು ನಾವು ತಿಳಿದುಕೊಳ್ಳುವುದು ದಟ್ಟ ಕಾಡನ್ನು ಸಮೀಕ್ಷಿಸಿದಾಗ, ಅಲ್ಲಿ ನೂರಾರು ಜಾತಿಯ ಸಸ್ಯಗಳು ನಿಬಿಡವಾಗಿ ಬೆಳೆದರೂ ಎಲ್ಲ ಸಸ್ಯಗಳಿಗೆ ಬೇಕಾಗುವ ಆಹಾರವನ್ನು ಒದಗಿಸಲಾಗುವಂತೆ ವ್ಯವಸ್ಥೆ ಇದೆ. ಅದೇ ಕಾಡಿನಲ್ಲಿ ಹುಟ್ಟಿ ಬದುಕಿ ಸಾಯುವ ಸೂಕ್ಷ್ಮ ಜೀವಿಗಳು, ಕ್ರಿಮಿ ಕೀಟ, ಪಕ್ಷಿ ಪ್ರಾಣಿಗಳೂ ಬದುಕಲು ಒಂದಕ್ಕೊಂದು ಪೂರಕವಾಗಿ ಸಹಕರಿಸುತ್ತಿರುತ್ತದೆ. ಮಣ್ಣು, ನೀರು, ಸೂರ್ಯ ರಶ್ಮಿ, ಗಾಳಿ, ಸೂಕ್ಷ್ಮ ಜೀವಿಗಳು, ಮರ ಗಿಡಗಳು ಪ್ರಾಣಿ ಪಕ್ಷಿಗಳು ಇವುಗಳ ಸಹ ಜೀವನದ (ಕಾಡು ಎಂದು ಕರೆಯಲಾಗುತ್ತಿರುವ) ಈ ಅದ್ಭುತ ರಚನೆಯನ್ನು ಮಾನವ ಆದಷ್ಟು ಕೆದಕದೆ ಮುಂದುವರಿಯಲು ಬಿಟ್ಟು ತನ್ನ ಅಗತ್ಯತೆಗಳಿಗೆ ಮಿತವಾಗಿ ಕಾಡುತ್ಪತ್ತಿಯನ್ನು ಬಳಸಿಕೊಂಡರೆ ಕಾಡು ಕಾಮಧೇನುವಾಗಿ ಪರಿಣಮಿಸುತ್ತದೆ.

ಆಧುನಿಕ ವಿಜ್ಞಾನವು ಹಲವು ದೃಷ್ಟಿಯಿಂದ ಅಧ್ಯಯನ ನಡೆಸಿದ ಮೇಲೆ ಉಷ್ಣವಲಯದ ಕಾಡುಗಳ ಅದ್ಭುತ ವೈವಿಧ್ಯತೆಯನ್ನುಳಿಸುವುದರಲ್ಲಿಯೇ ಮಾನವ ಕೋಟಿಯ ಉಳಿವು ಅಡಗಿದೆ ಎಂದು ತೀರ್ಮಾನಿಸಿದೆ. ಹೀಗೆಂದೇ ನಮ್ಮ ಸರಕಾರವೂ ಸಹ ಹೊಸ ಅರಣ್ಯ ನೀತಿಯನ್ನು ರೂಪಿಸಿದೆ. ಇದಕ್ಕೆ ಪೂರಕವಾಗಿ ಈ ಪ್ರಬಂಧದಲ್ಲಿ ಎರಡು ಪಟ್ಟಿಯನ್ನು ಕೊಡಲಾಗಿದೆ. ಇದು ಆಂಶಿಕ ಪಟ್ಟಿ ಮಾತ್ರ. ಇತರರೂ ಈ ಪಟ್ಟಿಗೆ ಇನ್ನೂ ಹೆಚ್ಚಿನ ಹೆಸರುಗಳನ್ನು ಸೇರಿಸಬಹುದು. ಅಲ್ಲದೆ ಯಾರಿಗೂ ಅದರ ಬಳಕೆ ತಿಳಿಯದ ಸಸಿಗಳು ಕೂಡ ನಮ್ಮ ಕಾಡುಗಳಲ್ಲಿ ಅನೇಕ ಕಾಣಸಿಗುತ್ತವೆ. ಅವುಗಳನ್ನು ಸಹ ಅನಗತ್ಯವಾಗಿ ಕಿತ್ತು ಹಾಕಬಾರದು. ಅವುಗಳ ಪ್ರಯೋಜನ ಮುಂದಿನ ಜನಾಂಗ ಕಂಡುಕೊಳ್ಳಬಹುದು. ಇಂದು ಏನೂ ಪ್ರಯೋಜನವಿಲ್ಲದ ಗಿಡ ಮುಂದೆ ಬಹಳ ಪ್ರಯೋಜನ

ಕಾರಿಯಾಗಿ ಪರಿಣಮಿಸಬಹುದು.

ನಮ್ಮ ರಾಜ್ಯದ ಭೂ ಪ್ರದೇಶಗಳನ್ನೂ, ಅರಣ್ಯಗಳನ್ನೂ ಹಲವು ರೀತಿಯಲ್ಲಿ ವರ್ಗೀಕರಣ ಮಾಡಿರುತ್ತಾರೆ. ಆಡಳಿತ ದೃಷ್ಟಿಯಿಂದ ಕಾಡುಗಳು ಒಂದು ರೀತಿಯಲ್ಲಿ ವರ್ಗೀಕರಣವಾಗಿದ್ದರೆ ಅವು ಇರುವ ಪ್ರದೇಶ, ಅಲ್ಲಿ ಇರುವ ಸಸಿಗಳು, ಅನುಭವಿಸುವ ಹವಾಮಾನ, ತೇವಾಂಶ, ಸೂರ್ಯರಶ್ಮಿ, ಸಮುದ್ರಮಟ್ಟದಿಂದ ಇರುವ ಎತ್ತರ, ಅದರಿಂದ ಇರುವ ದೂರ ಮುಂತಾದ ವಿಷಯಗಳ ಆದಾರದ ಮೇಲೆ, ಎರಡನೇ ರೀತಿಯ ವರ್ಗೀಕರಣ ಇರುತ್ತದೆ. ಗ್ರಾಮ ಅರಣ್ಯ ಸಮಿತಿಗಳು ಕಾಡುಗಳನ್ನು ಉತ್ತಮ ರೀತಿಯಲ್ಲಿ ನಿರ್ವಹಣೆ ಮಾಡುವರೇ ಈ ಎರಡನೇ ರೀತಿಯ ವರ್ಗೀಕರಣವೇ ಉತ್ತಮ ಆಧಾರ. ಈ ವರ್ಗೀಕರಣವನ್ನು ಸಾಧಾರಣವಾಗಿ ಹೀಗೆಂದು ತಿಳಿದುಕೊಳ್ಳಬಹುದು. (1) ನಿತ್ಯ ಹರಿದ್ವರ್ಣ ಕಾಡು, (2) ಭಾಗಶಃ ನಿತ್ಯ ಹರಿದ್ವರ್ಣ ಮತ್ತು ಭಾಗಶಃ ಎಲೆ ಉದುರಿಸುವ ಕಾಡು, (3) ಬೇಸಿಗೆಯಲ್ಲಿ ಎಲೆ ಉದುರಿಸುವ ಕಾಡು, (4) ಕುರುಚಲು ಗಿಡ, ಪೊದರುಗಳುಳ್ಳ ಮತ್ತು ಕಳ್ಳಿ ಜಾತಿಯ ಕಾಡು, (5) ಹುಲ್ಲುಗಾವಲುಗಳು (6) ನದಿಗಳು ಸಮುದ್ರವನ್ನು ಸೇರುವಲ್ಲಿಯ ಸವಳು ಭೂಮಿಯ ಕಾಡು ಇತ್ಯಾದಿ. ಇನ್ನೊಂದು ಮುಖ್ಯ ವಿಚಾರವೆಂದರೆ ಜೆ. ಎಫ್.ಪಿ.ಎಂ. ಆಡಿಯಲ್ಲಿ ಗ್ರಾಮ ಸಮಿತಿಗಳ ಕೈಗೆ ಬರುವ ಪ್ರದೇಶಗಳು ಫಲಾನುಭವಿಗಳ ವಸತಿ ಮತ್ತು ಕೃಷಿ ಭೂಮಿಗಳಿಂದ ಎಷ್ಟು ದೂರದಲ್ಲಿದೆ ಎಂಬುದು. ಅಲೆಮಾರು ಜಾನುವಾರು, ಕಳವು, ಮೇಲ್ವೀಚಾರಣೆ ಮುಂತಾದ ವಿಷಯಗಳಿಂದಾಗಿ ಇದು ಅಗತ್ಯ. ಗ್ರಾಮಸ್ಥರು ಜಂಟಿ ಯೋಜನೆಯನ್ನು ತಯಾರಿಸುವಾಗ ಇನ್ನೂ ಹಲವು ವಿಷಯಗಳನ್ನು ನೆನಪಿನಲ್ಲಿಟ್ಟುಕೊಳ್ಳಬೇಕು. ನಮ್ಮ ಸರಕಾರಿ ಸಿಬ್ಬಂದಿಯವರು (ಅರಣ್ಯ ಇಲಾಖೆ, ಕಂದಾಯ ಇಲಾಖೆ, ಕೈಗಾರಿಕಾ ಇಲಾಖೆ, ಆರೋಗ್ಯ ಇಲಾಖೆ ಇತ್ಯಾದಿ) ಕಾಡುಗಳಿಂದ ಮುಖ್ಯ ಸಂಪಾದನೆ ಎಂದರೆ ಮರಗಳನ್ನು ಕಡಿದು ಮಾರುವುದು ಮತ್ತು ಕಾಡುಗಳ ಇತರ ಉತ್ಪತ್ತಿಯನ್ನು ಕೂಡ (ರಾಮಪತ್ರಿ, ಗುಗ್ಗುಳ, ಗೇರು ಬೀಜ, ನೊರೆಕಾಯಿ, ಸೀಗೆ ಇತ್ಯಾದಿ) ಕೈಗಾರಿಕೆಗಳಿಗೆ ಮಾರುವುದು ಎಂದು ತಿಳಿದುಕೊಂಡಿರುತ್ತಾರೆ. ಹೆಚ್ಚಿನ ಗ್ರಾಮವಾಸಿಗಳೂ ಇದನ್ನೇ (ವಿಚಾರಿಸದೇ) ಒಪ್ಪುವವರಿದ್ದಾರೆ. ಇಂತಹ ಮನೋಭಾವದಿಂದ ನಮ್ಮ ದೇಶದ ಪಟ್ಟಣಗಳಿಗೆ, ದೊಡ್ಡ ಕೈಗಾರಿಕೆಗಳಿಗೆ ಮತ್ತು ಗ್ರಾಮಗಳಲ್ಲಿ ನೆಲೆಸಿಕೊಂಡು ಪಟ್ಟಣಗಳ ಹಾಗೂ ಕೈಗಾರಿಕೆಗಳ ಬೇಡಿಕೆಗಳನ್ನು ಪೂರೈಸುತ್ತಿರುವ ಮಧ್ಯವರ್ತಿಗಳಿಗೆ ಮಾತ್ರ ಪ್ರಯೋಜನವಾದೀತು. ಗ್ರಾಮಗಳಲ್ಲಿರುವ ಬಡ ಶೋಷಿತ ವರ್ಗಗಳಿಗಾಗಲೀ, ಗ್ರಾಮದ ಕುಶಲಕರ್ಮಿಗಳಿಗಾಗಲೀ ಯಾವ ಪ್ರಯೋಜನವೂ ಆಗಲಾರದು. ಹೀಗಾಗಿ ಗ್ರಾಮಾರಣ್ಯ ಸಮಿತಿಗಳು ಬೇರೆ ವಿಷಯಗಳಿಗೆ ಆದ್ಯತೆ ಕೊಡಬೇಕು. ಕೃಷಿ ಉಪಕರಣಗಳ ತಯಾರಿಯಲ್ಲಿ ಆಯುರ್ವೇದ ಹಾಗೂ ನಾಟಿ ವೈದ್ಯ ಔಷಧಿಗಳ ತಯಾರಿಯಲ್ಲಿ, ಬೇಲಿಗೆ ಬೇಕಾಗುವ ಸಾಮಾಗ್ರಿಗಳು, ಗ್ರಾಮವಾಸಿಗರ ಮನೆಗಳಿಗೆ ಬೇಕಾಗುವ ವಸ್ತುಗಳು, ಕೃಷಿಗೆ ಬೇಕಾಗುವ ಸಾಮಾಗ್ರಿಗಳು, ಹಸುರೆಲೆ ಗೊಬ್ಬರ, ಮಣ್ಣಿನ ಸವಕಳಿ ತಡೆಯುವಲ್ಲಿ, ಬೇರೆ ಬೇರೆ ನಾರುಗಳು, ಹಣ್ಣುಗಳು, ಸುಂದರವಾದ ಸುವಾಸನೆಯುಳ್ಳ ಹೂವುಗಳು, ಪಟ್ಟಣ ವಾಸಿಗಳನ್ನು ವಿಹಾರಕ್ಕೆಂದು ಆಕರ್ಷಿಸುವಂತೆ ದೃಶ್ಯಗಳ ರಚನೆ, ವನ್ಯ ಜೀವಿಗಳ ರಕ್ಷಣೆ, ಮುಂತಾದ ಅನೇಕ ವಿಷಯಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಗ್ರಾಮ ಸಮಿತಿಗಳು ಕಾರ್ಯ ಯೋಜನೆಗಳನ್ನು ತಯಾರಿಸಬೇಕು. ಉದಾಹರಿಸುವುದಾದರೆ ಸಾಗುವಾನಿ ಮರಕ್ಕಿಂತ ಅಧಿಕ ಆದ್ಯತೆಯನ್ನು ಮಾವು

ಹಲಸು, ಹೆಬ್ಬಲಸು, ನೇರಳೆ, ಬಿದಿರು, ಮೇವು ಕೊಡುವ ಮರಗಳು, ಉರುವಲು ಮರಗಳು, ಹುಲ್ಲು-ಹಳ್ಳಿ ಜೀವನದ ದೃಷ್ಟಿಯಲ್ಲಿ ಪ್ರಾಮುಖ್ಯತೆ ಪಡೆಯಬೇಕು. ಒಂದೇ ಜಾತಿಯ ಮರಗಳನ್ನು (ತೇಗ, ಚಬುಕು, ನೀಲಗಿರಿ, ಅಕೇಶಿಯಾ) ಸಾಲುಸಾಲಾಗಿ, ಒತ್ತೊತ್ತಾಗಿ ನೆಡುವುದು, ಮತ್ತೆ ಅವು ಬೆಳೆದ ಮೇಲೆ ಇಡೀ ನಡು ತೋಪಿನ ಮರಗಳನ್ನು ಒಮ್ಮೆಲೇ ಕಡಿದು ಮಾರುವುದು ಇಂತಹ ಪದ್ಧತಿಗಳನ್ನು ಗ್ರಾಮಾರಣ್ಯ ಸಮಿತಿಗಳು ಅನುಸರಿಸಬಾರದು. ಅಲ್ಲದೇ ಮರಗಳನ್ನು ಕಡಿದು ಪಟ್ಟಣಗಳಿಗೆ ಸಾಗಿಸಿ ಮಾರುವಾಗ ನೆರೆ ಗ್ರಾಮಗಳ ಗ್ರಾಮಾರಣ್ಯ ಸಮಿತಿಗಳೊಡನೆ ಸಹ ಕರಿಸಿಕೊಂಡು ಸಮಾಲೋಚನೆ ನಡೆಸಿ ತಮ್ಮ ತಮ್ಮ ಹಿತಾಸಕ್ತಿಗಳಿಗೆ ಧಕ್ಕೆಬಾರದಂತೆ ಚಟುವ ಟಿಕೆಗಳನ್ನು ರೂಪಿಸಿಕೊಳ್ಳಬೇಕು. ಹೀಗೆ ಮಾಡದಿದ್ದರೆ ಪಟ್ಟಣ ಹಾಗೂ ಕೈಗಾರಿಕೆಗಳ ಸಾಧಾರಣ ಬೇಡಿಕೆಗಿಂತ ಹೆಚ್ಚು ಅರಣ್ಯ ಉತ್ಪತ್ತಿ ಒಮ್ಮೆಲೇ ಅವರ ಕೈ ಸೇರಿ ಜೆ. ಎಫ್.ಪಿ.ಎಂ. ಫಲಾನುಭ ವಿಗಳಿಗೆ ನಷ್ಟವಾಗುತ್ತದೆ. ಅಲ್ಲದೆ ಒಂದು ಪ್ರದೇಶದ ಎಲ್ಲಾ ಮರಗಳನ್ನು ಒಮ್ಮೆಲೇ ಕಡಿದರೆ ಅನಿಯಂತ್ರಿತವಾಗಿ ಭೂಸವಕಳಿ ಸಾಗಿ ಹಲವು ರೀತಿಯ ತೊಂದರೆಗಳಿಗೆ ನಾಂದಿಯಾಗುತ್ತದೆ.

**ಅರಣ್ಯದ ಸಹಜ ಕೃಷಿ ಪದ್ಧತಿ** :- ಬಹಳ ಅವನತಿ ಹೊಂದಿದ ಭೂಪ್ರದೇಶ ಒಂದನ್ನು ಮಾನವರ ಹಸ್ತಕ್ಷೇಪವಿಲ್ಲದೆ ಬೆಳೆಯಲು ಬಿಟ್ಟು ಗಮನಿಸಿದಾಗ ಆ ಪ್ರದೇಶ ಚೇತರಿಸಿಕೊಳ್ಳುವ ರೀತಿ ಬಹಳ ಕುತೂಹಲಕಾರಿ. ಸಾಕಷ್ಟು ತೇವಾಂಶ ಉಂಟಾದ ಕೂಡಲೇ ( 3 - 4 ಮಳೆ ಬಂದೊಡನೆ) ಮೊಟ್ಟ ಮೊದಲಿಗೆ ಹಾವಸೆ ಬೆಳೆದು ತನ್ನ ಹಸಿರು ಬಲೆಯನ್ನು ನೈದು ಮಣ್ಣಿನ ಸವಕಳಿ ಆಗದಂತೆ ತಡೆ ಯುತ್ತದೆ. ಹಾವಸೆ ಮೇಲೆ ಒಂದು ರೀತಿಯ ಅಂಟು ಸಹ ಇದೆ. ಇದರಿಂದಾಗಿ ಚಿಕ್ಕ ಪುಟ್ಟ ಸಸಿಗಳು ಮತ್ತು ಹುಲ್ಲಿನ ಬೀಜಗಳು, ಹವಾಸೆಗೆ ಅಂಟಿಕೊಂಡು ಬೆಳೆಯುತ್ತವೆ. ಹೀಗೆ ಉಂಟಾದ ಸಾವ ಯವ ಪದಾರ್ಥಗಳ ಅನುಕೂಲತೆಯಿಂದಾಗಿ ಮತ್ತು ಅಲ್ಲಿಗೆ ಹುಲ್ಲು ಮೇಯಲೆಂದು ಬಂದ ಸಸ್ಯಾಹರಿ ಪ್ರಾಣಿಗಳ ಮಲ ಮೂತ್ರವೂ ಸೇರಿ ಅಲ್ಲಿ ಕರುಚಲು ಗಿಡಗಳೂ ಕಳ್ಳಿಗಳೂ ಮತ್ತು ಅವುಗಳಲ್ಲಿ ಬೆಳೆಯುವ ಬಳ್ಳಿ ಜಾತಿಗಳೂ ಸೇರಿಕೊಂಡು ಮಣ್ಣನ್ನು ಇನ್ನೂ ಫಲವತ್ತಾಗಿ ಮಾಡುತ್ತವೆ. ಈಗ ಎರೆಹುಳ, ಇಲಿ, ಗೆದ್ದಲು ಮುಂತಾದ ಜೀವಿಗಳ ಜೀವನಕ್ಕೆ ಅನುಕೂಲವಾಗಿ ಅವುಗಳ ಕ್ರಿಯೆಯಿಂದ ಮಣ್ಣು ಕದಡಿ ಮುಂದೆ ಹಲವು ಜಾತಿಯ ಮರಗಳ ಬೀಜಗಳ ಪ್ರಸಾರ ಈ ಹಿಂದೆ ತಿಳಿಸಿದ ರೀತಿಗಳಲ್ಲಿ ನಡೆದು ಒಂದು ಅರಣ್ಯ ಪುನರ್‌ನಿರ್ಮಾಣವಾಗುತ್ತದೆ. ಪ್ರಕೃತಿ ಕೃಷಿ ಗೈದ ಈ ಅರಣ್ಯ ಬಹಳ ವೈವಿಧ್ಯಮಯವಾಗಿಯೂ ಗ್ರಾಮವಾಸಿಗಳಿಗೆ ಬಹಳ ಉಪಯುಕ್ತ ವಾಗಿಯೂ ಮುಂದಕ್ಕೆ ರೂಪುಗೊಳ್ಳುತ್ತದೆ. ನಮ್ಮ ಜಿಲ್ಲೆಯ ಹವಾಮಾನ ಇದಕ್ಕೆ ಅನುಕೂಲ. ಆದರೆ ಕೆಲವೇ ಜಾತಿಯ ಮರಗಳಿಗೆ ಕೈಗಾರಿಕೆಗಳಲ್ಲಿ ಮತ್ತು ಪಟ್ಟಣಗಳಲ್ಲಿ ಬೇಡಿಕೆ ಹೆಚ್ಚಾಯಿತು. ಗ್ರಾಮಗಳಲ್ಲಿ ಸಾಂಪ್ರದಾಯಿಕವಾಗಿ ನಡೆದು ಬಂದಿದ್ದ ಕುಶಲ ಕೈಗಾರಿಕೆಗಳು ಅಳಿದವು. ಗ್ರಾಮಸ್ಥರು ಪಟ್ಟಣಗಳಿಗೆ ವಲಸೆ ಹೋದರು. ಇವೇ ಮುಂತಾದ ಚಾರಿತ್ರಿಕ ಕಾರಣಗಳಿಂದಾಗಿ ಕಳೆದ 100 ವರ್ಷಗಳಿಂದೀಚೆ ದಟ್ಟ ಅರಣ್ಯಗಳನ್ನು ಕಡಿದು ಅಲ್ಲಿ ಕೈಗಾರಿಕೆಗಳಿಗೆ ಬೇಡಿಕೆ ಇರುವ ಒಂದೇ ಜಾತಿಯ ನೆಡು ತೋಪುಗಳನ್ನು ರಚಿಸಲು ಭಾರತ ಸರಕಾರ (ಸ್ವಾತಂತ್ರ್ಯದ ಮೊದಲು ಬ್ರಿಟೀಷ್ ಸರಕಾರ) ಹೊರಟಿತು. ಇದನ್ನು ಅರಣ್ಯಕೃಷಿಯೆಂದು ಜನರು ಇಂದಿಗೂ ತಪ್ಪಾಗಿ ತಿಳಿದುಕೊಳ್ಳುವುದುಂಟು. ಈ ಪದ್ಧತಿ ಮರಗಳ ಕೃಷಿ ಎಂದು ಕರೆಯಬಹುದೇನೋ ಹೊರತು ಅರಣ್ಯಕೃಷಿ ಎಂದು ಕರೆಯಲಾಗದು. ಪ್ರಕೃತಿಯೇ ಅರಣ್ಯಕೃಷಿಯನ್ನು ಮಾಡುತ್ತದೆ. ಮಾನವರು

ಈ ಕೃಷಿಗೆ ಪ್ರಕೃತಿಯೊಡನೆ ಸಹಕರಿಸಬಹುದು. ತನ್ನ ಜೀವರಾಶಿಯ ವೈವಿಧ್ಯತೆಯನ್ನುಳಿಸಲು ಪ್ರಕೃತಿ ರೂಪಿಸಿದ ತಂತ್ರವೇ ಅರಣ್ಯ. ಮನುಷ್ಯರು ತಮ್ಮೊಳಗೆ ಮಾತನಾಡುವ ಭಾಷೆಗಳಲ್ಲಿ ಈ ತಂತ್ರವನ್ನು ಒಟ್ಟಾಗಿ ಸೂಚಿಸುವರೇ "ಅರಣ್ಯ", "ಕಾಡು", "ವನ" ಮುಂತಾದ ಹೆಸರುಗಳನ್ನು ಕೊಟ್ಟರು. ಲೋಹದ ಕೊಡಲಿಗಳನ್ನು ತಯಾರಿಸಿ ಅವುಗಳಿಗೆ ಮರದ ಹಿಡಿಗಳನ್ನು ಜೋಡಿಸಿ ತಮಗೆ ಆಶ್ರಯ ನೀಡುತ್ತಿರುವ ಮರಗಳನ್ನೇ ಮನ ಬಂದಂತೆ ನಾಶಮಾಡಲು ಮಾನವ ಹೊರಟಿದ್ದಾನೆ. ಪ್ರಾಣಿಗಳ ಮಾಂಸದಿಂದ ಲಾಭ ಮಾಡಲು ಕೆಲವರು ಪ್ರಾಣಿಗಳನ್ನು ಕಡಿಯುತ್ತಾರೆ. ಅಂತೆಯೇ ಕೆಲವರು ಮರಗಳ ಹಣಗಳಿಂದ ಲಾಭ ಮಾಡಲು ಮರಗಳನ್ನು ಕಡಿಯುತ್ತಾರೆ.

ಜೀವಂತ ಮರಗಳಿಂದ ನಾವು ಹಲವು ರೀತಿಯಲ್ಲಿ ದೀರ್ಘಕಾಲದ ಲಾಭ ಪಡೆಯಬಹುದು. ಒಂದು ಮರವನ್ನು ಕಡಿದರೆ ಒಮ್ಮೆ ಸ್ವಲ್ಪ ಹಣ ಕೈಗೆ ಸಿಗಬಹುದು. ಜೀವಂತ ಮರಗಳು ನಮಗೆ ಸದಾ ಮಾಡುವ ಉಪಕಾರವನ್ನು ಹೋಲಿಸಿದಾಗ ಈ 'ಲಾಭ' ಅಲ್ಪವೆಂದೇ ಹೇಳಬೇಕು. ಆದರೂ ಗ್ರಾಮಾರಣ್ಯ ಸಮಿತಿಗಳು ಗ್ರಾಮದ ಸರ್ವತೋಮುಖ ಅಭಿವೃದ್ಧಿಗೆ ದುಡಿಯುವಾಗ ಹಣದ ಆಗತ್ಯತೆ ಇದ್ದೇ ಇರುತ್ತದೆ. ಹಾಗಾಗಿ ತಮ್ಮ ವಶ ಬರುವ ಅರಣ್ಯ ಪ್ರದೇಶದ ಸ್ವಲ್ಪ ಭಾಗದಲ್ಲಿ ನಡುತೋಪುಗಳನ್ನು ನಿರ್ಮಿಸಲು ಯೋಜನೆ ಹಾಕಿಕೊಳ್ಳುವುದು ಆಗತ್ಯ. ಇಲ್ಲಿಯೂ ನಾವು ನಮ್ಮ ಕಾಡಿನ ಮರಗಳನ್ನು ಗಮನಿಸಿದಾಗ ಕೆಲವು ಜಾತಿಯ ಗಿಡಗಳು (ಕರ್ಮರ, ಧೂಪ, ಬೋವು) ಗುಂಪುಗುಂಪಾಗಿ ಬೆಳೆಯುವ ಸ್ವಭಾವವನ್ನು ಹೊಂದಿರುವುದು ಕಾಣಬಹುದು. ಇಂತಹ ಮರಗಳುಳ್ಳ ಪ್ರದೇಶಗಳನ್ನು ಪ್ರತ್ಯೇಕಿಸಿ ಸ್ವಾಭಾವಿಕವಾಗಿ ಬೆಳೆಯಲು ಬಿಟ್ಟು ಒಳ್ಳೆಯ ಬೆಲೆ ಬಂದಾಗ ಕಡಿಯಬಹುದು. ಹೀಗೆ ಕಡಿಯುವಾಗ ಗರಗಸದ ಉಪಯೋಗದಿಂದ ಕಡಿದರೆ ಪುನಃ ಹಿಳ್ಳೆ (ಚಿಳ್ಳೆ) ಕೊಟ್ಟು ಶೀಘ್ರವಾಗಿ ಕಡಿಯಲು ಆಗುತ್ತದೆ. ಭೂಮಿಯಲ್ಲಿ ಸಾಕಷ್ಟು ತೇವಾಂಶ ಇದ್ದಾಗ ಕಡಿದರೆ, ಕಾಡು ಪುನಃ ಚೇತರಿಸಿಕೊಳ್ಳಲು ಅನುಕೂಲ. ನಮ್ಮ ಊರಿನಲ್ಲಿ ಸಾಗುವಾನಿ ಗಿಡಗಳನ್ನು ನೆಡುತೋಪಾಗಿ ಕೃಷಿ ಮಾಡಿದರೆ ಹೆಚ್ಚಿನ ಕಡೆಗಳಲ್ಲಿ ಉತ್ತಮವಾಗಿ ಬರುವುದಿಲ್ಲ. ಅವು ಕಡಿಯಲು ಯೋಗ್ಯ ಗಾತ್ರಕ್ಕೆ ಬೆಳೆಯಬೇಕಾದರೆ 70 (ಎಪ್ಪತ್ತು) ವರ್ಷಗಳಾದರೂ ಬೇಕು. ಇದಕ್ಕೆ ಬದಲಾಗಿ ಇವುಗಳನ್ನು ಒಳ್ಳೆ ಆಳವಾದ, ಉತ್ತರ ದಿಕ್ಕಿಗೆ ಮಾಲಿಕೊಂಡಿರುವ ಮಿಶ್ರ ಕಾಡಿನಲ್ಲಿ ಅವಕಾಶ ಇದ್ದ ಕಡೆ ಎಕರೆ ಒಂದರ 40-50 ಗಿಡಗಳಂತೆ ನೆಟ್ಟು 2-3 ವರ್ಷ ಚೆನ್ನಾಗಿ ನಿರ್ವಹಣೆ ಮಾಡಿದರೆ 50 ವರ್ಷಗಳಲ್ಲಿ ಉತ್ತಮ ಗಾತ್ರದ ಮರ ಸಿಗುತ್ತದೆ. ಇವುಗಳನ್ನು ಸಹ ಗರಗಸ ಉಪಯೋಗಿಸಿ ಕಡಿದು ಹಿಳ್ಳೆಯನ್ನು ಚೆನ್ನಾಗಿ ನೋಡಿಕೊಂಡರೆ 40 ವರ್ಷಗಳಲ್ಲಿಯೇ ಕಡಿಯಬಹುದು. ತೇಗ ಬೇಸಿಗೆಯಲ್ಲಿ ಎಲೆ ಉದುರಿಸುವ ಜಾತಿಗೆ ಸೇರಿದ ಸಸಿ. ಇದನ್ನು ವರ್ಷವಿಡೀ ಕೃತಕ ರೀತಿಯಲ್ಲಿ ಪೋಷಿಸಿ ಪ್ರಚೋದಿಸಿದರೆ ಅದರ ಮೋಪು ದೃಢತೆ ಮತ್ತು ಸೌಂದರ್ಯವನ್ನು ಹೊಂದಲಾರದು. ಗ್ರಾಮಾರಣ್ಯದಲ್ಲಿ ಬಿದಿರನ್ನು ಅತಿ ಅಗತ್ಯವಾಗಿ ನೆಡಬೇಕು. ಬಡವರ ತೇಗ (ಸಾಗುವಾನಿ) ಎಂಬ ಖ್ಯಾತಿ ಬಿದಿರಿಗಿದೆ. ಮುಳ್ಳಿಲ್ಲದ ಉತ್ತಮ ಬಿದಿರುಗಳ ಜಾತಿಗಳಿವೆ. ಇವುಗಳ ವಿಷಯ ಅರಣ್ಯ ಇಲಾಖೆಯವರಿಗೂ ಗೊತ್ತಿದೆ. ಇನ್ನು ಮುಂದೆ ಇಂತಹ ಬಿದಿರಿನ ಬಳಕೆ ಹೆಚ್ಚು ಮಾಡಬೇಕು. ಇದರಿಂದ ಗ್ರಾಮೀಣ ಜನರಿಗೆ ತುಂಬ ಲಾಭವಿದೆ. ಗ್ರಾಮದಲ್ಲಿ ಬಿದಿರನ್ನು ಆಧರಿಸಿ ಹಲವು ಕೈಗಾರಿಗಳನ್ನು ಮಾಡಬಹುದು. ಬಿದಿರನ್ನು ನೆಟ್ಟು 7-8 ವರ್ಷಗಳ ನಂತರ ಒಂದು ಗುಂಪಿನಿಂದ 7-10 ಬಿದಿರು ಪ್ರತಿ ವರ್ಷ ಕಡಿಯಬಹುದು. ಒಂದು ಎಕರೆ ಪ್ರದೇಶದಲ್ಲಿ 50-60

ಗುಂಪುಗಳನ್ನು ನೆಡಬಹುದು. ಅಥವಾ ಬೇಲಿಗಳಲ್ಲಿ, ಹೊಳೆ ದಂಡೆಗಳಲ್ಲಿ ನೆಡಬಹುದು. 5 ಎಕರೆ ಬಿದಿರಿನ ಕಾಡು ಅಥವಾ 250 ಗುಂಪುಗಳಿಂದ ರೂ. 50,000-00 ಪ್ರತಿ ವರ್ಷ ಉತ್ಪತ್ತಿ ಸಿಗುತ್ತದೆ (ಖರ್ಚು ಕಳೆದು). ವರ್ಷ ಒಂದಕ್ಕೆ ಕನಿಷ್ಠ 4000 ಮಾನವ ದಿನಗಳ ಕೆಲಸ ಗ್ರಾಮದ ಜನರಿಗೆ ಸಿಗುತ್ತದೆ. ಬಿದಿರಿನ ಉಪಯೋಗ ಅಪಾರ. ಥಾಯಿಲ್ಯಾಂಡ್, ಇಂಡೋನೇಶಿಯಾ, ಜಪಾನ್, ಚೀನಾ ಮುಂತಾದ ರಾಷ್ಟ್ರಗಳಲ್ಲಿ ಈ ವಿಚಾರವಾಗಿ ಬಹಳ ಮಾಹಿತಿ ಸಿಗುತ್ತದೆ. ಬಿದಿರಿನ ಬಳಕೆ ಹೆಚ್ಚಿದಂತೆ ಕಾಡಿನ ಇತರ ಮರಗಳು ಉಳಿದುಕೊಳ್ಳುತ್ತವೆ. ಜಪಾನಿನಂತಹ ಮುಂದುವರಿದ ದೇಶಗಳು ಬಿದಿರಿಗೆ ನೀಡುವ ಪ್ರಾಮುಖ್ಯತೆಯನ್ನು ನಾವು ಇಲ್ಲಿ ನೆನಪಿಸಿಕೊಳ್ಳಬೇಕು. ಬಿದಿರಿನಿಂದ ತಯಾರಿಸಿದ ಸಾಮಗ್ರಿಗಳಿಗೆ, ಪೀಠೋಪಕರಣಗಳಿಗೆ ಉತ್ತಮ ಘನತೆಯನ್ನು ಅಲ್ಲಿ ಎಲ್ಲಾ ವರ್ಗದ ಜನರು ಕೊಡುತ್ತಾರೆ. ಅಲ್ಲದೆ ಆಕರ್ಷಕ ಹಾಗೂ ದೀರ್ಘ ಬಾಳಿಕೆ ಬರುವ ಸಾಮಾಗ್ರಿಗಳನ್ನು ಬಿದಿರಿನಿಂದ ತಯಾರಿಸುವುದನ್ನು ಕಾಣಬಹುದು. ತೂತು ಬಾವಿಯ ಕೊಳವೆಗಳನ್ನಾಗಿಯೂ, ಮಾನವರ ಆಹಾರವಾಗಿಯೂ ಬಿದಿರಿನ ಉಪಯೋಗವಿದೆ. ಗ್ರಾಮ ಅರಣ್ಯ ಸಮಿತಿಗಳು ಬಿದಿರಿನ ಉಪಯೋಗವನ್ನು ಸಮರ್ಪಕವಾಗಿ ಮಾಡಿಕೊಳ್ಳಲು ಕಾನೂನು ತೊಡಕುಗಳು ಇದ್ದಲ್ಲಿ ಅದನ್ನು ಸೂಕ್ತ ರೀತಿಯಲ್ಲಿ ತಿದ್ದುಪಡಿ ಮಾಡುವಂತೆ ಸ್ವಯಂ ಸೇವಾ ಸಂಸ್ಥೆಗಳೂ ಗ್ರಾಮಸ್ಥರೂ ಸರಕಾರದ ಮೇಲೆ ಒತ್ತಡ ತರಬೇಕು. ಗ್ರಾಮಾರಣ್ಯಗಳಲ್ಲಿ ಗ್ರಾಮವಾಸಿಗಳಿಗೆ, ಜಾನುವಾರುಗಳಿಗೆ, ಕಾಡಿನ ಪ್ರಾಣಿ ಪಕ್ಷಿಗಳಿಗೆ ಕೂಡ ಆಹಾರ ಕೊಡುವಂತಹ ಗಿಡಮರಗಳನ್ನು ಬೆಳೆಸುವ ಯೋಜನೆಗಳನ್ನು ಹಾಕಿಕೊಳ್ಳಬೇಕು. ಉದಾಹರಣೆಗೆ ಹೇಳುವುದಾದರೆ ಹಲಸು, ಮಾವು, ಹೆಬ್ಬಲಸು, ನೇರಳೆ, ಪುನರ್ಪುಳಿ, ಉಂಡೆಹುಳಿ, ಅತ್ತಿ, ತಾಳೆಮರ, ಬೊಗರಿ, ಪೇರಳೆ ಇತ್ಯಾದಿ. ಹಾಗೆಯೇ ಸುವಾಸನೆಯುಳ್ಳ ಮಕರಂದ ಹಾಗೂ ವರ್ಣಮಯ ಪುಷ್ಪಗಳನ್ನು ಕೊಡುವ ಮರಗಳೂ ಬೇಕು. ಉದಾ:- ರೆಂಜೆ, ಮಂದಾರ, ಸಂಪಿಗೆ, ಸುರಗಿ, ಹೊನ್ನೆ, ಗೋಸಂಪಗೆ, ಹೊಂಗಾರ, ಮೇಫ್ಲವರ್, ಪೆಲ್ಟೋ ಫೋರಮ್. ಅರಣ್ಯದಲ್ಲಿ ಪ್ರಾಣಿಗಳಿಗೆ ಆಹಾರ ಸಿಗುತ್ತಿದ್ದರೆ ಮಾನವರು ಬೆಳೆದ ಪೈರಿಗೆ ಹಾನಿ ಕಡಿಮೆಯಾಗುತ್ತದೆ. ಹಕ್ಕಿಗಳು ಹುಳಗಳನ್ನು ನಿಯಂತ್ರಿಸುತ್ತವೆ. ಚಿಟ್ಟೆ, ಜೇನುನೊಣ ಪರಾಗ ಸ್ಪರ್ಶಕ್ಕೆ ಸಹಾಯಕವಾಗಿ ಫಸಲು ಅಧಿಕವಾಗುತ್ತದೆ. ಹೂವಿನ ಪರಿಮಳಗಳು ಮಾನವನ ಹಲವು ರೋಗಗಳನ್ನು (ದೈಹಿಕ ಹಾಗೂ ಮಾನಸಿಕ) ಗುಣಪಡಿಸಲು ಸಹಾಯಕವಾಗುತ್ತವೆಂದು ಆಧಾರಗಳಿವೆ. ದೊಡ್ಡ ದೊಡ್ಡ ಉತ್ತಮ ಮರಗಳುಳ್ಳ ವೈವಿಧ್ಯಮಯ ಕಾಡುಗಳಲ್ಲಿ ಅನುಭವಿಸುವ ಶಾಂತತೆ ಋಷಿಗಳನ್ನು, ತಾತ್ವಿಕರನ್ನು ಪೂರ್ವ ಕಾಲದಿಂದಲೂ ಅಲ್ಲಿಗೆ ಸೆಳೆದಿದೆ.

ಕೆಲವು ಜಾತಿಯ ಮರಗಳ ಅಡಿಯಲ್ಲಿ (ನೆರಳಿನಲ್ಲಿ) ಇತರ ಸಸಿಗಳು ಚೆನ್ನಾಗಿ ಬೆಳೆಯುವುದಿಲ್ಲ. ಉ:- ಹುಣಸೆ, ದೇವದಾರು, ಮೇಫ್ಲವರ್, ಪೆಲ್ಟೋಫೋರಮ್, ಬಿದಿರು. ಈ ಮರಗಳ ಬೇರುಗಳು ಮಣ್ಣಿನ ಮೇಲ್ಪದರದಲ್ಲಿಯೇ ಅಧಿಕ ಪ್ರಮಾಣದಲ್ಲಿ ಹರಡಿ ಆಹಾರ ಸೇವಿಸುವುದರಿಂದ ಅಲ್ಲಿ ಇತರ ಮರಗಳು ಬೆಳೆಯಲು ಆಹಾರ ಸಿಗುವುದಿಲ್ಲ. ಗೋಳಿಮರ, ಅಶ್ವತ, ಕಿರುಗೋಳಿ, ದೇವದಾರು ಮುಂತಾದ ಮರಗಳನ್ನು ಕಟ್ಟಡಗಳ ಹತ್ತಿರ ಅಥವಾ ಪೈರಿನ ಹೊಲಗಳ ಹತ್ತಿರ ಬೆಳೆಸಬಾರದು. ಈ ಮರಗಳು 15 ಎಕರೆ ಅಥವಾ 20 ಎಕರೆಗೆ ಒಂದರಂತೆ ಇದ್ದರೆ ಉಪಕಾರವಿದೆ. ಇವುಗಳ ಎಲೆಗಳೂ, ಹಣ್ಣುಗಳೂ, ಜಾನುವಾರುಗಳಿಗೆ, ಹಕ್ಕಿಗಳಿಗೆ

ಉತ್ತಮ ಆಹಾರ. ಈ ಮರಗಳು ಎತ್ತರವಾಗಿ ಬೆಳೆದಾಗ ಇತರ ಮರಗಳಿಗೆ ಗಾಳಿಯ ಹೊಡೆತವನ್ನು ತಪ್ಪಿಸುತ್ತವೆ. ಇವುಗಳ ಬೇರು ಆಳಕ್ಕೆ ಮಣ್ಣಿನ ಒಳಗೆ ನುಗ್ಗಿ ಪೋಷಕಾಂಶಗಳನ್ನು ಮೇಲಕ್ಕೆ ತರುತ್ತವೆ. ಮತ್ತೆ ಅವುಗಳ ಎಲೆಗಳೂ, ಹಣ್ಣುಗಳೂ ನೆಲಕ್ಕೆ ಉರುಳಿ ಇತರ ಪ್ರಾಣಿಗಳಿಗೆ ಆಹಾರವಾದಾಗ ಈ ಪೋಷಕಗಳು (ಮುಖ್ಯವಾಗಿ ಲಘು ಪೋಷಕಗಳು) ಸಿಗುವ ಕಾರಣ ಅವುಗಳ ಆರೋಗ್ಯ ಚೆನ್ನಾಗಿರುತ್ತದೆ.ಮಾನವರ ಹಲವು ಕಾಯಿಲೆಗಳಿಗೆ ಬೇಕಾಗುವ ಮದ್ದು ಕೂಡಾ ಈ ಮರಗಳ ವಿವಿಧ ಭಾಗಗಳಿಂದ ತಯಾರಿಸಬಹುದು. ಅಲ್ಲದೆ ಈ ಮರಗಳು ಗಾತ್ರದಲ್ಲಿ ದೊಡ್ಡ ದಾಗಿ ಬಹಳ ಕಾಲ ಬಾಳುವ ಕಾರಣ ಇವುಗಳ ಮೇಲೆ ವೀಕ್ಷಣೆ (ಹಾಗೂ ಕೆಲವೊಮ್ಮೆ ರಕ್ಷಣೆಗೂ) ಠಾಣಗಳನ್ನು ರಚಿಸಬಹುದು. ಈ ಮರಗಳಲ್ಲಿ ಗೂಗೆ, ಗಿಡುಗ, ಕುಪ್ಪುಳು, ಕೊಕ್ಕರೆ ಮುಂತಾದ ಹಕ್ಕಿಗಳು ಆಸರೆ ಪಡೆಯುತ್ತವೆ. ಈ ಹಕ್ಕಿಗಳು ಮಾನವರಿಗೆ ಹಲವು ರೀತಿಯಲ್ಲಿ ಉಪಕಾರಿಗಳಾಗಿವೆ.

ನಮ್ಮ ಜಿಲ್ಲೆಯ ಹೆಚ್ಚಿನ ಮರಗಳು ನಿತ್ಯ ಹರಿದ್ವರ್ಣ ಯಾ ಭಾಗಶಃ ಎಲೆ ಉದಿರಿಸುವ ನಿತ್ಯ ಹರಿದ್ವರ್ಣ ಜಾತಿಗೆ ಸೇರಿದವುಗಳು. ಆಯಾ ಪ್ರದೇಶದ ಮಣ್ಣಿನ ಫಲವತ್ತತೆ, ಮೃದುತ್ವ, ಆಳ, ಇದರಲ್ಲಿ ಲಭ್ಯವಿರುವ ತೇವಾಂಶ, ನೀರು ಬಸಿದು ಹೋಗುವ ಗುಣ, ಸಮತಟ್ಟು ಹಾಗೂ ಇಳಿ ಜಾರು ಸ್ವಭಾವ, ಮಾಲಿರುವ ದಿಕ್ಕು ಸಮುದ್ರ ಮಟ್ಟದಿಂದ ಇರುವ ಎತ್ತರ, ಆ ಪ್ರದೇಶದಲ್ಲಿ ಕಾಲ ಕಾಲಕ್ಕೆ ಬೀಸುವ ಗಾಳಿಯ ರಭಸ ಮುಂತಾದ ಗುಣಗಳನ್ನು ಅನುಸರಿಸಿ ಮರಗಳು ಎತ್ತರ ವಾಗಿಯೋ ಅಥವಾ ಕುಬ್ಜವಾಗಿಯೋ ಯಾ ಮಾಲಿಕೊಂಡೋ ಬೆಳೆಯುತ್ತವೆ. ಕೆಲವೇ ವೃಕ್ಷ ಜಾತಿಗಳನ್ನು ಬಿಟ್ಟರೆ ಹೆಚ್ಚಿನ ಎಲ್ಲಾ ಮರಗಳು ತಮ್ಮ ನೆರಳಿನಲ್ಲಿ ಇತರ ಸಸಿಗಳು ಬೆಳೆದು ಬಾಳಲು ಅವಕಾಶ ಕೊಡುತ್ತವೆ. ಎತ್ತರದ ಗುಡ್ಡಗಳ ನೆತ್ತಿ ಮತ್ತು ಪದವುಗಳು ಹುಲ್ಲು ಗಾವಲುಗ ಳಾಗಿರುತ್ತವೆ. ಇಲ್ಲಿ ಚೆನ್ನಾಗಿ ಬಿಸಿಲು ಬೀಳುವ ಕಾರಣ ಈ ಹುಲ್ಲು ಆರೋಗ್ಯಕರ. ಸಸ್ಯಾಹಾರಿ ಪ್ರಾಣಿಗಳು ಅಲ್ಲಿ ಹುಲ್ಲು ಮೇಯುವುದರಿಂದ ಆರೋಗ್ಯವಾಗಿರುತ್ತವೆ. ಅಲ್ಲಿಯೇ ಅವು ಮಲ ಮೂತ್ರ ಮಾಡುತ್ತವೆ. ಆ ಹುಲ್ಲುಗಾವಲಿಗೆ ಇದುವೆ ಪೋಷಣೆ. ಈ ಮಲಮೂತ್ರ ಸ್ವಲ್ಪ ಮಟ್ಟಿಗೆ ಮಳೆ ನೀರಲ್ಲಿ ಕರಗುವುದರಿಂದ ಗುಡ್ಡದ, ಪದವಿನ, ಕೆಳ ಪ್ರದೇಶಗಳಲ್ಲಿರುವ ಸಸಿಗಳಿಗೂ ಆಹಾರ ಒದಗುತ್ತದೆ. ಪ್ರಕೃತಿಯ ಇಂತಹ ರಚನೆಯನ್ನು ಕಂಡಾಗ ನಾವು ಮುಗ್ಧರಾಗುತ್ತೇವೆ. ಈ ಗುಡ್ಡದ ನೆತ್ತಿ ಯಾ ಪದವುಗಳಲ್ಲಿ ಬಿದ್ದ ನೀರು ಅಲ್ಲಲ್ಲಿಯೇ ಇಂಗುವಂತೆ ನಾವು ಕ್ರಮ ಕೈಕೊಂಡರೆ ಜಿಲ್ಲೆಯ ಅಂತರ್ಜಲ ಶೇಖರಣೆಗೆ ಹೆಚ್ಚು ಉಪಯುಕ್ತ.

ಉಷ್ಣ ವಲಯದ ಕಾಡುಗಳಲ್ಲಿ ಸಸ್ಯ ಸಂಕುಲ ಒಂದರ ಅಡಿಯಲ್ಲಿ ಇನ್ನೊಂದರಂತೆ ಹಲವು ಪದರಗಳಲ್ಲಿ ನಿಬಿಡವಾಗಿ ಬೆಳೆಯುವುದನ್ನು ಕಾಣುತ್ತೇವೆ. ಕೆಲವರು 'ವಿಜ್ಞಾನಿಗಳು' ಈ ರಚ ನೆಯನ್ನು"ಸಾಮರ್ಥ್ಯ ವುಳ್ಳ ಜೀವಿಗಳು ಉಳಿದುಕೊಳ್ಳಲು ನಡೆಸುತ್ತಿರುವ ನಿರಂತರ ಹೋರಾಟದ ದೃಶ್ಯ" ಎಂದು ಕರೆದರೆ, ಇತರರು ಇದು ಜೀವಿಗಳ ಸಹ- ಜೀವನದ ಒಂದು ಸುಂದರ ಚಿತ್ರ ಎಂದು ಹೇಳುವುದುಂಟು. ನಾವು ಬಿಚ್ಚು ಮನದಿಂದ ನೋಡಿದಾಗ ಈ ಎರಡನೆ ದೃಷ್ಟಿಯನ್ನೇ ಒಪ್ಪಿಕೊಳ್ಳ ಬೇಕು. ಒಂದು ಎಕರೆ ಉತ್ತಮ ಕೃಷಿ ಭೂಮಿಯಲ್ಲಿ ಬಹಳ ದಕ್ಷತೆಯಿಂದ ಆಧುನಿಕ ರೀತಿಯಲ್ಲಿ, ಕೃತಕ ಗೊಬ್ಬರಗಳನ್ನೂ, 'ರಾಸಾಯನಿಕಗಳನ್ನೂ ಬಳಸಿ ವ್ಯವಸಾಯಮಾಡಿದಾಗ ಒಂದು ವರ್ಷದಲ್ಲಿ ಆ ಪ್ರದೇಶದಲ್ಲಿ ಬೆಳೆದಿರುವ ಸಾವಯವ ಪದಾರ್ಥಗಳ (ಕಾಳು, ಕಾಂಡ, ಎಲೆ, ಬೇರು

ಪೂರ) ಒಟ್ಟು ಪ್ರಮಾಣಕ್ಕಿಂತ 6-7 ಪಟ್ಟು ಹೆಚ್ಚು ಸಾವಯವ ಪದಾರ್ಥಗಳು ಅದೇ ಒಂದು ವರ್ಷ ಕಾಲದಲ್ಲಿ ಪ್ರಕೃತಿಯು ತನ್ನ ರೀತಿಯಲ್ಲಿ ಕೃಷಿ ಮಾಡುತ್ತಿರುವ ಉಷ್ಣ ವಲಯದ ಅರಣ್ಯದಲ್ಲಿ ಉತ್ಪತ್ತಿ ಆಗುತ್ತದೆ ಎಂದೂ ಮತ್ತು ಅದೇ ಸಮಯದಲ್ಲಿ ಅದೇ ಪ್ರದೇಶದಲ್ಲಿ ಕೆಲವು ಸಹಸ್ರ ಕಿಲೋ ಗ್ರಾಂಗಳಷ್ಟು ಪ್ರಾಣಿಗಳೂ ಜೀವಿಗಳೂ ಜೀವನ ಸಾಗಿಸುತ್ತಿರುತ್ತವೆಂದೂ ವಿಜ್ಞಾನಿಗಳೇ ಹೇಳುತ್ತಾರೆ!! ಮಾನವ ಬೆಳೆ ಬೆಳೆಯುತ್ತಿರುವಾಗ ಅಲ್ಲಿಯೇ ಪ್ರಾಣಿಗಳನ್ನು ಬದುಕಲು ಬಿಡ ಬಲ್ಲನೇ? ಉತ್ತಮ ಸಾವಯವ ಭರಿತ ಮಣ್ಣಿನಲ್ಲಿ ಹಲವು ವರ್ಗದ ಸೂಕ್ಷ್ಮಾಣು ಜೀವಿಗಳು ಸಾರ ಜನಕವನ್ನು, ರಂಜಕವನ್ನು, ವಾಯುವಿನಿಂದ, ಸಾವಯುವ ವಸ್ತುಗಳಿಂದ ಮತ್ತು ಹಲವು ಜೀವಿಗಳ ಮೃತ ದೇಹದಿಂದ ತೆಗೆದುಕೊಳ್ಳುತ್ತವೆ. ಈ ಸೂಕ್ಷ್ಮಾಣು ಜೀವಿಗಳಲ್ಲಿ ಹಲವು ಮರಗಳ ಬೇರುಗ ಳೊಂದಿಗೆ ಸಹ ಜೀವನ ನಡೆಸುವಂತವೂ ಇದ್ದಾವೆ. ಮಣ್ಣಿನಲ್ಲಿ ಸ್ವತಂತ್ರವಾಗಿ ಜೀವಿಸುವಂತಹವೂ ಇದ್ದಾವೆ. ಆದರೆ ಎಲ್ಲಾ ಸೂಕ್ಷ್ಮಾಣು ಜೀವಿಗಳು ಬದುಕಲು ಸಾವಯವ ವಸ್ತುಗಳು ಮತ್ತು ಇದರಿಂದ ಉಂಟಾಗುವ ಹ್ಯೂಮಸ್ ಅಗತ್ಯ. ಈ ಎಲ್ಲಾ ಪರಿಸ್ಥಿತಿ ಒಮ್ಮೆಲೇ ಇರುವುದು ದಟ್ಟವಾಗಿ ಬೆಳೆದಿರುವ ವೈವಿಧ್ಯಮಯ ಉಷ್ಣ ವಲಯದ ಕಾಡುಗಳಲ್ಲಿ. ಮರಗಳು ನೇರವಾಗಿ ಎತ್ತರಕ್ಕೆ ಬೆಳೆಯಲೂ ಸಹ ಈ ಪರಿಸ್ಥಿತಿ ಅನುಕೂಲ. ಹಾಗಾಗಿ ಆ ಮರಗಳು ಚೆನ್ನಾಗಿ ಬೆಳೆದು ಮಾರಲು ಪಕ್ವವಾದಾಗ ಉತ್ತಮ ಬೆಲೆಯೂ ಬೆಳೆದವರಿಗೆ ಸಿಗುತ್ತದೆ. ಮರಗಳ ಆರೋಗ್ಯಕ್ಕೂ ಇದು ಉತ್ತಮ ಪರಿಸರ.

ಇದಕ್ಕೆ ಬದಲಾಗಿ ಕಾಡನ್ನೆಲ್ಲಾ ಕಡಿದು ಅದರಲ್ಲಿ ಕೈಗಾರಿಕೆಗಳಿಗೆ ಬೇಕಾಗುವ ಕೆಲವೇ ಮರಗಳನ್ನು ಹೊರ ತೆಗೆದು ಉಳಿದವುಗಳಿಗೆ ಬೆಂಕಿ ಕೊಟ್ಟು ನಾಶಮಾಡಿ ನಂತರ ಆ ಜಾಗದಲ್ಲಿ ಒಂದೇ ಜಾತಿಯ ಮರಗಳನ್ನು ಸಾಲು ಸಾಲಾಗಿ ನೆಟ್ಟಾಗ ಕೆಲವು ಕಾಲ ಚೆನ್ನಾಗಿ ಬೆಳೆದು ಮತ್ತೆ ರೋಗ, ಗೆದ್ದಲು ಬಾದೆ ಮುಂತಾದ ತೊಂದರೆಗಳಿಗೆ ಒಳಪಡುತ್ತವೆ. ಇಂತಲ್ಲಿ ಬಿಸಿಲಿನ ತಾಪವೂ ಹೆಚ್ಚುತ್ತದೆ. ಮಣ್ಣು ಒಣಗುತ್ತದೆ. ಮರಗಳು ಗಾಳಿಗೆ ಬಲಿಯಾಗುತ್ತವೆ. ಅಂತರ್ಜಲಮಟ್ಟ ಕೆಳಗೆ ಹೋಗುತ್ತದೆ. ಸಾವಯವ ವಸ್ತು ಕಡಿಮೆಯಾಗಿ ಆಹಾರ ಚಕ್ರ ಕುಸಿಯುತ್ತದೆ. ಈ ಪರಿಸ್ಥಿತಿಯಲ್ಲಿ ಮರಗಳು ಕುಬ್ಜವಾಗಿ ಅಡ್ಡ ರೆಂಬೆಗಳು ಅತಿಯಾಗಿ ಬೆಳೆದು ಗಂಟುಗಳು ಹೆಚ್ಚಾಗುತ್ತದೆ. ಇದ ರಿಂದ ಕೀಳು ಮಟ್ಟದ ಮೋಪಾಗಿ ಪರಿವರ್ತನೆ ಹೊಂದಿದ ಮರಕ್ಕೆ ಉತ್ತಮ ಬೆಲೆ ಸಿಗದ ಕಾರಣ ಬೆಳೆದವರಿಗೆ ನಷ್ಟವಾಗುತ್ತದೆ. ಕಳೆಗಳ ತೊಂದರೆಯೂ ಹೆಚ್ಚು. ಪ್ರಾಣಿಗಳಿಗೆ, ಹಕ್ಕಿಗಳಿಗೆ ಇಂತಹ ನಡುತೋಪುಗಳಲ್ಲಿ ಆಹಾರ ಸಿಗದ ಕಾರಣ ಅವು ಮಾನವರು ಕೃಷಿ ಮಾಡಿದ ಹೊಲಗಳನ್ನು ನುಗ್ಗಿ ಬೆಳೆ ನಾಶಮಾಡುತ್ತವೆ. ಉರುವಲುಗೆಂದು ಈ ರೀತಿಯಲ್ಲಿ ಕೃಷಿ ಮಾಡಿದ "ನಡುತೋಪು" ನಿಂದ 10 ವರ್ಷಗಳಿಗೊಮ್ಮೆ ಆದಾಯ ಸಿಗಬಹುದಾದರೆ ಮೋಪಿನ ಮರಗಳನ್ನು ನೆಟ್ಟರೆ 60-70 ವರ್ಷಗಳು ಬೇಕಾಗುತ್ತದೆ. ಅಂದರೆ ಒಂದು ತಲೆಮಾರಿನ ಜನ ಇನ್ನೊಂದು ತಲೆಮಾರಿನ ಜನಗಳಿಗೆ ಉಪಕಾರ ಮಾಡಬಹುದು.

ಈ ರೀತಿ ಏಕಜಾತಿ ಮರಗಳ ಕೃಷಿಗಿಂತ ಬಹು ಉಪಯೋಗಿ ಮರಗಳಿರುವ ವೈವಿಧ್ಯಮಯ ಕಾಡು ಬೆಳೆಸಿ, ಅದರ ವಿವಿಧ ಫಲಪೈರನ್ನು ನಾನಾ ರೀತಿಯಲ್ಲಿ ಉಪಯೋಗಿಸಲು ಮತ್ತು ಸಂಸ್ಕ ರಿಸಿ ಮಾರಲು ಕಲಿತಾಗ ಗ್ರಾಮಸ್ತರಿಗೆ ಹೆಚ್ಚಿನ ಉಪಕಾರ ಆಗುತ್ತದೆ. ನಮ್ಮೂರಿನ ಮರಗಿಡಗಳು ಎರಡು ಕಾಲದಲ್ಲಿ ಫಲಕೊಡುತ್ತವೆ. ಬೀಜ ಸಂಗ್ರಹಣ ಈ ಎರಡು ಕಾಲದಲ್ಲಿ ಆಗಬೇಕು. ಈ

ಬೀಜ ಸಂಗ್ರಹಣ ಕಾಲಗಳೆಂದರೆ (1) ಏಪ್ರಿಲ್, ಮೇ ಮತ್ತು (2) ನವೆಂಬರ್, ದಶಂಬರ, ಜನವರಿ. ಹಲವು ಜಾತಿಗಳನ್ನು ಈ ಕಾಲದಲ್ಲಿ ಸಂಗ್ರಹಿಸಿಡಬಹುದು. ಮತ್ತು ನಮಗೆ ಸಂಗ್ರಹಿಸ ಬೇಕಾದ ಫಲ ಬೀಜಗಳಿರುವ ಮರಗಳ ಅಡಿಯಲ್ಲಿ ಬಿದ್ದಿರುವ ದರಳೆಯನ್ನು ಒಟ್ಟು ಮಾಡಿದರೆ ಅದರಲ್ಲಿ ಆ ಮರಗಳ ಬೀಜಗಳು ಇರುತ್ತವೆ. ಇದು ಉತ್ತಮ ಕ್ರಮ. ಹೀಗೆ ಒಟ್ಟುಗೂಡಿಸಿದ ಬೀಜಗಳನ್ನು ದರಳೆಯ ಒಟ್ಟಿಗೆ ಬಿಸಿಲಿನಲ್ಲಿ ಹರಡಿ ಒಣಗಿಸಬೇಕು. ನಾವು ಕೈಯಿಂದ ಕ್ಕೊದ ಬೀಜಗಳನ್ನು ಕೂಡ ಚೆನ್ನಾಗಿ ಒಣಗಿಸಿ ಈ ದರಳೆ ಒಟ್ಟಿಗೆ ಚೆನ್ನಾಗಿ ಮಿಶ್ರಮಾಡಿ ಗೋಣಿಗಳಲ್ಲಿ ತುಂಬಿಸಿ ಗೆದ್ದಲು ಮತ್ತು ಇಲಿ ಮುಂತಾದವುಗಳಿಂದ ರಕ್ಷಣೆಕೊಟ್ಟು ದಾಸ್ತಾನು ಇಡಬೇಕು. ಮಳೆಗಾಲ ಆರಂಭವಾದೊಡನೆ ನಾವು ಮಿಶ್ರಕಾಡು ಬೆಳೆಸಲು ಉದ್ದೇಶಿಸಿದ ಪ್ರದೇಶದಲ್ಲಿ 5-6 ಮೀಟರ್ ಅಂತರದಲ್ಲಿ, ಒಂದುವರೆ ಮೀಟರ್ ಚಚ್ಚದರ, 10 ಸೆ.ಮೀ. ದಪ್ಪವಾಗಿ ಸಿಕಸಿಕ್ಕ ರೀತಿಯಲ್ಲಿ ಅಂಕುಡೊಂಕಾಗಿ (ನೇರ ಸಾಲುಗಳು ಬೇಡ) ಕಳಗಳ ರೂಪದಲ್ಲಿ ಈ ಬೀಜಗಳನ್ನು (ದರಳೆಯ ಒಟ್ಟಿಗೆ) ಅಗತೆ ಮಾಡಿದ ಭೂಮಿಯ ಮೇಲೆ ಹರಡಬೇಕು. ಈ ಕಳಗಳ ಮೇಲೆ ಮುಳ್ಳಿನ ಗಿಡಗಳ ರೆಂಬೆಗಳನ್ನು ಕಡಿದು ಹರಡಬೇಕು. ಇದರಿಂದಾಗಿ ಪ್ರಾಣಿಗಳು ಮೊಳಕೆಯನ್ನು ತಿನ್ನದಂತೆಯೂ ಜನರೂ ಪ್ರಾಣಿಗಳೂ ಆ ಕಳಗಳ ಮೇಲೆ ಅಡ್ಡಾಡಿ ಚದುರಿಸದಂತೆಯೂ ಆಗುತ್ತದೆ. ಅಲ್ಲದೆ ಗಾಳಿ, ಮಳೆ ನೀರು ಆ ದರಳೆ ಪಾತಿಗಳನ್ನು ಚೆಲ್ಲಾಡದಂತೆ ರಕ್ಷಣೆಯೂ ಸಿಗುತ್ತದೆ. ಈ ಪುಸ್ತಕದಲ್ಲಿ ಹೆಸರಿಸಿದ ಹೆಚ್ಚಿನ ಸಸಿಗಳು ಈ ರೀತಿಯ ಕೃಷಿಗೆ ಒಗ್ಗುತ್ತವೆ. ಈ ರೀತಿ ಯಲ್ಲಿ ಬಿತ್ತಿದರೆ ನಾವು ಪ್ರಕೃತಿಯ ಪದ್ಧತಿಯನ್ನು ಅನುಸರಿಸಿದಂತೆ ಆಗುತ್ತದೆ. ಇಂತಹ ಪದ್ಧತಿ ಯಲ್ಲಿ ಹಲವು ಜಾತಿಯ ಗಿಡಗಳು ಗುಂಪಾಗಿ ಬೆಳೆದು ಒಂದನ್ನೊಂದು ಆಧರಿಸಿ ಬೆಳೆಯುತ್ತದೆ. ಹೊರ ದೇಶಗಳಿಂದ ತಂದ ಮರದ ಬೀಜಗಳು ಈ ರೀತಿಯಲ್ಲಿ ಹರಡಿದರೆ ಮೊಳಕೆ ಒಡೆಯುವುದು ಪ್ರಯಾಸವಾಗಬಹುದು. ಆದರೆ ನಮ್ಮ ಊರಿನ ಮರಗಳ ಜಾತಿಗೆ ಅಂತಹ ತೊಂದರೆ ಏನೂ ಬರುವುದಿಲ್ಲ. ಈ ಲೇಖನದಲ್ಲಿ ಕೊಟ್ಟಂತಹ ಪಟ್ಟಿಯನ್ನು ಚೆನ್ನಾಗಿ ಗಮನಿಸಿರಿ. ಅದರಲ್ಲಿ Euphorbiaceae, Cesalpinea, Mimosacea, Leguminoseae, Apocynaceae , Papilionoideae ಎಂಬ ಕುಟುಂಬದ ಹೆಸರುಗಳನ್ನು ಬರೆದ ಕಲಮಿನ ಎದುರು ಹೆಸರಿಸಿದ ಸಸಿಗಳು ಮಿಶ್ರ ರೀತಿ ಯಲ್ಲಿ ಪ್ರತಿ ಹೆಕ್ಟೇರ್‌ನಲ್ಲಿ ಕೆಲವಾದರೂ ಇದ್ದರೆ ಉತ್ತಮ. ಕಾರಣವೆಂದರೆ ಈ ಸಸಿಗಳ ಬೇರಿನಲ್ಲಿ ಸಹಜೀವನ ನಡೆಸುತ್ತಿರುವ ಸೂಕ್ಷ್ಮಾಣು ಜೀವಿಗಳು ವಾತಾವರಣದಿಂದ ಸಸ್ಯ ಪೋಷಕಗಳನ್ನು ತಯಾರಿಸಿ ಇತರ ಗಿಡಗಳು ಚೆನ್ನಾಗಿ ಬೆಳೆಯಲು ಸಹಾಯ ಮಾಡುತ್ತವೆ. ಪ್ರತಿ ಗ್ರಾಮಗಳಲ್ಲಿ ಈ ರೀತಿಯ ಮಿಶ್ರಕಾಡುಗಳನ್ನು ಬೆಳೆಸುವುದು ಗ್ರಾಮದ ಹಿತ ದೃಷ್ಟಿಯಿಂದ ಆಗತ್ಯವಿದೆ.

ಈ ಬರಹದ ಒಟ್ಟಿಗೆ ಇರುವ ಪಟ್ಟಿಗಳಲ್ಲಿ ಇಂಗ್ಲೀಷ್ ಮತ್ತು ಕನ್ನಡದಲ್ಲಿ ಗಿಡಗಳ ಹೆಸರುಗಳನ್ನು ಬರೆದಿದೆ. ಆ ಸಸಿಗಳು ಮಾನವರಿಗೆ ಯಾವ ರೀತಿಯಲ್ಲಿ ಉಪಕಾರಿಗಳಾಗಿವೆ ಎಂಬುದನ್ನು ಕೂಡ ವಿವರಿಸಿದೆ. ಆದರೆ ಈ ಗಿಡಗಳ ಸಂಪೂರ್ಣ ವಿವರಗಳನ್ನು ಕೊಡಲಾಗಿದೆ ಎಂದು ತಿಳಿದುಕೊಳ್ಳಬಾರದು. ಈ ವಿವರಣೆಗಳ ಮುಖ್ಯ ಉದ್ದೇಶವೆಂದರೆ ಮರಗಳ ವಿಚಾರದಲ್ಲಿ ಕುತೂಹಲ ಮೂಡಿಸುವುದಾಗಿರುತ್ತದೆ. ಒಂದನೇ ಪಟ್ಟಿಯಲ್ಲಿನ ಗಿಡಗಳ ಹೆಸರುಗಳು ಎರಡನೆಯ ಪಟ್ಟಿಯಲ್ಲಿಯೂ ಹಲವು ಇವೆ. ಎರಡನೆಯ ಪಟ್ಟಿಯಲ್ಲಿ ಹೆಸರಿಸಿದ ಗಿಡಗಳು ಬೇಲಿ

ಯಾಗಿಯೂ ಇತರ ಗಿಡಗಳ ಅಡಿಯಲ್ಲಿಯೂ, ನೆರಳಿನಲ್ಲಿಯೂ, ಒತ್ತೊತ್ತಾಗಿ ದುಸ್ತರ ಪರಿಸ್ಥಿತಿಗಳಲ್ಲಿಯೂ ಬೆಳೆಯಬಲ್ಲ ಗಿಡಗಳನ್ನು ಗುರುತಿಸಲು ಅನುಕೂಲವಾಗುವಂತೆ ಮಾಡುವ ಉದ್ದೇಶದಿಂದ ಪಟ್ಟಿ ಮಾಡಿದ್ದಾಗಿರುತ್ತದೆ. ಕೀಳು ದರ್ಜೆ ಭೂಮಿಗಳಲ್ಲಿಯೂ ಕೂಡ ಈ ಎರಡನೆ ಪಟ್ಟಿಯ ಗಿಡಗಳು ಸುಲಭವಾಗಿ ಸ್ಥಾಪನೆಗೊಳ್ಳುತ್ತವೆ. ಹೀಗೆ, ಕಷ್ಟಗಳನ್ನು ಸಹಿಸಬಲ್ಲ ಸಸಿಗಳು ಸ್ಥಾಪನೆಗೊಂಡ ಮೇಲೆ ಆ ಪ್ರದೇಶವು (ಕೆಲವು ಸಮಯದ ಮೇಲೆ) ಹೆಚ್ಚು ಸಾವಯುವ ವಸ್ತುಗಳನ್ನು ಹೊಂದುವುದರಿಂದ ಮಣ್ಣು ಉತ್ತಮಗೊಂಡು ಉತ್ತಮ ಜಾತಿಯ ಮತ್ತು ಎತ್ತರಕ್ಕೆ ಬೆಳೆಯುವ ಇತರ ಜಾತಿಯ ಮರಗಳನ್ನು ನೆಟ್ಟು ಬೆಳೆಸಲು ಅನುಕೂಲವಾಗುತ್ತದೆ. ಆದರೆ ಎತ್ತರಕ್ಕೆ ಬೆಳೆದ ಮರಗಳ ಅಡಿಯಲ್ಲಿಯೂ ಇತರ ಕುಬ್ಜ ಕುರುಚಲು ನೆರಳಿನಲ್ಲಿ ಬೆಳೆಯ ಬಲ್ಲ ಗಿಡಗಳೂ ಇರಬೇಕು. ಇಲ್ಲವಾದರೆ ಈ ಎತ್ತರದ ಮರಗಳಿಂದ ತೊಟ್ಟುವ ಮಳೆ ಹನಿಗಳು ನೇರ ವಾಗಿ ಭೂಮಿಗೆ ಬಡಿದು ಮಣ್ಣಿನ ಸವಕಳಿ ಹೆಚ್ಚಾಗುವುದಲ್ಲದೆ ಸಸ್ಯ ಪೋಷಕಗಳೂ, ಸಾವಯುವ ವಸ್ತುಗಳೂ ಕೊಚ್ಚಿ ಹೋಗುತ್ತವೆ. ಹೀಗಾಗಿ ಮಣ್ಣು ಸಾರವನ್ನು ಕಳೆದುಕೊಂಡು ಬೇರು ಮೇಲಕ್ಕೆ ಕಾಣಿಸಿಕೊಂಡು ಸಸಿಗಳು ಚೆನ್ನಾಗಿ ಬೆಳೆಯುವುದಿಲ್ಲ. ನಮ್ಮ ಕಾಡುಗಳಲ್ಲಿ ಈ ಅಡಿಪದರ ಸಸಿಗಳನ್ನು ಕೂಡ ಅತಿ ಜಾಗ್ರತೆಯಿಂದ ನಿರ್ವಹಿಸಿ ಉಳಿಸಬೇಕು. ಮಾನವರು, ಪ್ರಾಣಿ, ಪಕ್ಷಿಗಳು ತಿನ್ನುವ ಯೋಗ್ಯ ಹಣ್ಣನ್ನು ಹಲವು ಮುಳ್ಳಿನ ಗಿಡಗಳು ಕೊಡುತ್ತವೆ. ಈ ಮುಳ್ಳಿನ ಗಿಡಗಳ ಮೇಲೆ ಸುರಕ್ಷಿತವಾಗಿ ಹಲವು ಸಣ್ಣ ಹಕ್ಕಿಗಳು ಗೂಡು ಕಟ್ಟಿ ಸಂಸಾರ ಮಾಡುತ್ತವೆ. ಕ್ರಿಮಿ ಕೀಟಗಳನ್ನು ನಿಯಂತ್ರಣ ಮಾಡುವಲ್ಲಿ ಮತ್ತು ಪರಾಗ ಸ್ಪರ್ಶ ಕ್ರಿಯೆಯಲ್ಲಿ ಈ ಸಣ್ಣ ಹಕ್ಕಿಗಳ ಪಾತ್ರ ಬಲು ದೊಡ್ಡದು. ತನ್ನ ಸಣ್ಣ ಮರಿಗಳ ಹೊಟ್ಟೆ ತುಂಬಿಸಲು ತಾಯಿ ಮತ್ತು ತಂದೆ ಹಕ್ಕಿಗಳು ಸಾವಿರಗಟ್ಟಲೆ ಹುಳಗಳನ್ನು ಬೇಟೆಯಾಡಿ ನಾಶ ಮಾಡುತ್ತವೆ.

ದಕ್ಷಿಣ ಅಭಿಮುಖವಾಗಿ ಮಾಲಿರುವ ಗುಡ್ಡ ಪ್ರದೇಶ ಹೆಚ್ಚಾಗಿ ಕುರುಚಲು ಕಾಡನ್ನು ಹೊಂದಿರುತ್ತದೆ. ಇಂತಹ ಪ್ರದೇಶಗಳಲ್ಲಿ ಉತ್ತಮ ಮೋಪಿನ ಮರಗಳನ್ನು ಬೆಳೆಯುವುದು ಪ್ರಯಾಸಕರ. ತೆಂಕು ಮಾಲಿದ ಇಂತಹ ತಪ್ಪಲುಗಳು ಗಾಳಿಯ ಹೊಡೆತಕ್ಕೂ ಹೆಚ್ಚು ಗುರಿ ಯಾಗುತ್ತವೆ. ಹಾಗಾಗಿ ಇಲ್ಲಿ ಹುಲ್ಲುಗಾವಲು, ಕುರುಚಲು ಮರಗಳು ಮತ್ತು ಔಷಧೀಯ ಸಸಿಗಳನ್ನು ಬೆಳೆಸಲು ಯೋಚಿಸಬಹುದು. ಬೇಸಿಗೆಯಲ್ಲಿ ಎಲೆ ಉದುರಿಸುವ, ನೀರಿನ ಒತ್ತಡವನ್ನು ತಡೆದುಕೊಳ್ಳುವ ಜಾತಿಗಳನ್ನು ಇಲ್ಲಿ ನೆಡಬಹುದು.

ಗ್ರಾಮೀಣ ಜನರು ತಮ್ಮ ಉಪಯೋಗಕ್ಕೆಂದು ಕಾಡುಗಳಿಂದ, ಮರಗಳು ಉದುರಿಸಿದ ಹಣ್ಣಾದ ಎಲೆಗಳನ್ನು (ದರಳೆ) ಒಟ್ಟು ಗೂಡಿಸಿ ತಮ್ಮ ಮನೆಗಳಿಗೆ ತರುವುದುಂಟು. ಹೀಗೆ ಮಾಡು ವಾಗ ಕಾಡುಗಳ ತಳದಲ್ಲಿ ಬಿದ್ದಂತಹ ಎಲ್ಲಾ ದರಳೆಯನ್ನು ಸಂಪೂರ್ಣ ಗುಡಿಸಿ ತರಬಾರದು. ಕಾಡಿನ ತಳದಲ್ಲಿ ಬಿದ್ದಂತಹ ಹಣ್ಣೆಲೆಗಳ ಒಟ್ಟಿಗೆ ಆ ಕಾಡಿನಲ್ಲಿ ಮಾಗಿದಂತಹ ಬೀಜಗಳೂ ಕೂಡ ನೆಲಕ್ಕೆ ಉರುಳಿ ಸೇರಿಕೊಂಡಿರುತ್ತದೆ. ಹಾಗಾಗಿ ಕಾಡಿನ ತಳದಲ್ಲಿನ ಸಂಪೂರ್ಣ ದರಳೆಯನ್ನು ಒಟ್ಟು ಗೂಡಿಸಿ ತೆಗೆದುಕೊಂಡು ಹೋದರೆ ಮುಂದಕ್ಕೆ ಸಸಿಗಳು ವೃದ್ಧಿ ಆಗಲು ಸಾಧ್ಯವಾಗುವು ದಿಲ್ಲ. ದರಳೆಯನ್ನು ಆರಿಸುವಾಗ ಸ್ವಲ್ಪ ದರಳೆ ಅಲ್ಲಿಯೇ ಬಿಟ್ಟು ಅದರ ಮೇಲೆ ಗುರುತಿಗಾಗಿ ಮುಳ್ಳಿನ ರೆಂಬೆಗಳನ್ನು ಕಡಿದು ಹಾಕಿದರೆ ಮರಗಳ ಸಂತಾನ ಅಭಿವೃದ್ಧಿ ಮುಂದಿನ ವರ್ಷಗಳಲ್ಲಿ ಚೆನ್ನಾಗಿ ಆಗುತ್ತದೆ. ಇನ್ನು ಜಾನುವಾರುಗಳನ್ನು ಗುಡ್ಡೆಗೆ ಎಬ್ಬಿ ಮೇಯಿಸದೆ, ಉದ್ದದ

ಹಗ್ಗದಳಿಂದ ಗೂಟಗಳಿಗೆ ಕಟ್ಟಿ ಮೇಯಿಸಿದರೆ 2-3 ವರ್ಷಗಳೊಳಗೆ ಸಾಕಷ್ಟು ಹಸಿ ಹುಲ್ಲು ಹಲವು ಪಟ್ಟು ಹೆಚ್ಚು ಬೆಳೆದದ್ದು ದಾಖಲೆಗಳಾಗಿವೆ. ಕಾಡುಗಳಿಗೆ, ಹುಲ್ಲುಗಾವಲುಗಳಿಗೆ ಬೆಂಕಿ ಕೊಡುವ ಸಂಪ್ರದಾಯ ನಮ್ಮ ಜಿಲ್ಲೆಯ ಕೆಲವೆಡೆಗಳಲ್ಲಿ ಇದೆ. ಇದನ್ನು ಸಂಪೂರ್ಣ ನಿಲ್ಲಿಸಬೇಕು. ಮರದ ಅಡ್ಡ ರೆಂಬೆಗಳನ್ನು ಕೆಲವು ಕಾರಣಗಳಿಂದಾಗಿ ಕಡಿಯಬೇಕಾಗುತ್ತದೆ. ಹೀಗೆ ಮಾಡಲು ಉತ್ತಮ ಕಾಲ ಫೆಬ್ರುವರಿ ತಿಂಗಳು. ಹೀಗೆ ಗೆಲ್ಲುಗಳನ್ನು ಸವರುವಾಗ ಜೀವಂತ ಗೆಲ್ಲುಗಳನ್ನು ಮೂರನೆ ಒಂದಂಶವಾದರೂ ಕಡಿಯದೆ ಮರದಲ್ಲಿಯೇ ಉಳಿಸಬೇಕು. ಮೋಪಿನ ಮರಗಳು ನೆಟ್ಟಗೆ ಬೆಳೆಯುವಂತೆ ಗೆಲ್ಲುಗಳನ್ನು ಸವರಬೇಕು. ನೆಟ್ಟಗೆ ಬೆಳೆಯುವ ಕೊಡಿಯನ್ನುಳಿಸಬೇಕು. ಬೇಸಿಗೆಯಲ್ಲಿ ಎಲೆ ಉದುರಿಸುವ ಜಾತಿ ಮರಗಳು ಕಾಡುಗಳಲ್ಲಿ ಸಾಕಷ್ಟು ಪ್ರಮಾಣದಲ್ಲಿ ಇದ್ದರೆ ಮಣ್ಣಿನಲ್ಲಿ ಬೇಸಿಗೆ ತಿಂಗಳುಗಳಲ್ಲಿ ಉಷ್ಣತೆ ಏರದಂತೆ ಬಿದ್ದ ಎಲೆಗಳಿಂದ ರಕ್ಷಣೆ ಸಿಗುತ್ತದೆ. ತೇವಾಂಶ ನಿಯಂತ್ರಣ ಕೂಡ ಉತ್ತಮಗೊಳ್ಳುತ್ತದೆ.

ಮರಗಳ ಆಶ್ರಯ ಪಡೆದು ಮಾನವ ವಿಕಾಸಗೊಂಡ. ನಂತರ ಕೃಷಿ ಮಾಡಲು ಕಲಿತ. ಬೃಹತ್ ಕೈಗಾರಿಕೆಗಳನ್ನೂ ಕಾಲ ಕ್ರಮೇಣ ನಿರ್ಮಿಸಿದ. ಅದ್ಭುತ ವೇಗದಲ್ಲಿ ಚಲಿಸುವ ಯಂತ್ರಗಳನ್ನು ಸಂಪರ್ಕ ಸಾಧನಗಳನ್ನು ಕಂಡುಹಿಡಿದ. ಅಣುಶಕ್ತಿಯನ್ನು ಉಪಯೋಗಿಸಲು ಕಂಡುಕೊಂಡ. ತನ್ನ ಸಾಮರ್ಥ್ಯದಿಂದ ತಾನೇ ಸಮ್ಮೋಹಿತನಾಗಿ ತನ್ನ ಶಕ್ತಿಯನ್ನು ದುರುಪಯೋಗ ಪಡಿಸಿದ. ಆದರೆ ಈಗ ಅವನಿಗೆ ಅರಿವು ಮೂಡುತ್ತಿದೆ. ತನ್ನ ಜೀವನವನ್ನು ಸುಗಮಗೊಳಿಸಬೇಕಾದರೆ ಇತರ ಜೀವಿಗಳನ್ನು (ಮುಖ್ಯವಾಗಿ ಮರಗಳನ್ನು) ಉಳಿಯ ಬಿಟ್ಟು ಅವುಗಳೊಂದಿಗೆ ಸಹಜೀವನ ನಡೆಸುವುದರಲ್ಲಿ ಗುಟ್ಟು ಅಡಗಿದೆ ಎಂದು ತಿಳಿದುಕೊಂಡಿದ್ದಾನೆ. ಮರಗಳು ಕೈಗಾರಿಕೆಗಳ ಬಳಕೆಗೆ ಬೇಕಾಗುವ ಕಚ್ಚಾ ವಸ್ತುಗಳಲ್ಲ. ಗನಿಗಳಿಂದ ಕೈಗಾರಿಕೆಯ ಅಗತ್ಯತೆಗಳನ್ನು ಹೊರತೆಗೆದಂತೆ ಕಾಡುಗಳಿಂದ ಮರಗಳನ್ನು ಕಡಿಯಬಾರದು. ಮಾನವರಿಂದ ತಯಾರಿಸಲ್ಪಡುವ ಯಾವ ವಸ್ತುಗಳೂ ಸಹ ಈ ಜಗತ್ತಿನ ಇತರ ಜೀವಿಗಳಿಗೆ ಅಗತ್ಯವಲ್ಲ. ಆದರೆ ಇತರ ಜೀವಿಗಳು ಮನುಷ್ಯನ ಜೀವನಕ್ಕೆ ಅಗತ್ಯವುಳ್ಳ ಹಲವು ವಸ್ತುಗಳನ್ನು ಕೊಡುತ್ತಿವೆ. ಮರಗಳು ಮಾನವರ ಉಳಿವಿಗೆ ಅಗತ್ಯವಿರುವ ಪ್ರಾಕೃತಿಕ ರಚನೆ. ಇದನ್ನು ನಾವು ತಿಳಿದುಕೊಂಡಾಗ ಮಾತ್ರ ಮರಗಳ ಮಹತ್ವ ಅರ್ಥವಾದೀತು.

| ಕನ್ನಡದ ಹೆಸರು * | | ಉಪಯೋಗಕರ ಅಂಶಗಳು |
|---|---|---|
| ಪಟ್ಟಿ ನಂಬ್ರ - 1 | | |
| 1) ಕಾಚು, ಖದಿರ | : | ಬಣ್ಣ ಹಾಕಲು, ಔಷಧ, ಗೋಂದು, ಬಣ್ಣ, ಮರ ಬಹಳ ಘಟ್ಟಿ, ಗಾಡಿಗಳಿಗೆ. |
| 2) ಸೀಗೆ | : | ಪಸೆ ತೆಗೆಯಲು, ತೊಗಟೆಯಿಂದ ಬಣ್ಣ, ಚಿಗುರು ತಿನ್ನಬಹುದು, ಮದ್ದು ಮಾಡಲು, ಬೇಲಿ |

* ಇಂಗ್ಲಿಷ್‌ನಲ್ಲಿ ವೈಜ್ಞಾನಿಕ ಹೆಸರುಗಳೂ ಹಿಂದಿನಿಂದ ಕೊಟ್ಟಿದೆ - ಗಮನಿಸಿ ಪುಟ . 27 ನೋಡಿ

| | | |
|---|---|---|
| 3) ಬಿಲ್ವ, ಬಿಲ್‌ಪತ್ರೆ | : | ಎಳೇ ಹಣ್ಣು ಕಶಾಯ, ಗೋಂದು ಬಣ್ಣದೊಡನೆ ಬೆರೆಸಿದರೆ ಕಾಂತಿ ಹೆಚ್ಚುತ್ತದೆ. |
| 4) ಅರಸಿನ ತೇಗ, ಯತ್ತೃಗೆ | : | ಎಲೆಗಳು ಮೇವು, ಉತ್ತಮ ಮರ, ಗೆದ್ದಲಿನಿಂದ ರಕ್ಷಣೆ ಬೇಕು. |
| 5) ಮಂಜಟ್ಟಿ | : | ತಿರುಳು ಚಂದನ ಮರದಂತೆ ಹೋಲುವ ಉತ್ತಮ ಮರ. ಮರ ಕಶಾಯವಾಗಿ ಉಪಯೋಗ, ಬೀಜ ತೂಕಕ್ಕೆ ಉಪಯೋಗ. |
| 6) ಆನೆ ಕತ್ತಾಳಿ, ಭೂತಾಳೆ ಮುಂಡಿ, | : | ಹಸಿರು ವರ್ಣ ಜಾತಿ, ಉತ್ತಮ ನಾರು, ಎಲೆಯಲ್ಲಿ ಇರುವ ಎಣ್ಣೆ ಗೆದ್ದಲಿನಿಂದ ರಕ್ಷಣೆ ಕೊಡುತ್ತದೆ. |
| 7) ಆನೆ ಕತ್ತಾಳಿ | : | ನೀಲಿ ಹಸುರು ಬಣ್ಣದ ಜಾತಿ, ನಾರು ಒರಟು ಆದರೆ ಘಟ್ಟಿ |
| 8) ಗುಗ್ಗುಳ ಧೂಪ | : | ಮದ್ದು, ಸುಗುಂಧ ಗೋಂದು / ಮೆಯಣ, ಮಧ್ಯಮ ಗುಣದ ಮೋಪು ಎಲೆ ಚರ್ಮ ರೋಗಕ್ಕೆ |
| 9) ಲೋಳೆ ಸರ, ಕುಮಾರಿ | : | 'ಎಕ್ಸ್‌ರೇ' ವ್ರಣಕ್ಕೆ ಉಪಕಾರಿ, ಕ್ಷಯ ಮದ್ದು ಬಣ್ಣ ತೆಗಯುತ್ತಾರೆ. ಹೂವ್ವು ತೊಟ್ಟು, ಉಪ್ಪಿನಕಾಯಿ |
| 10) ಬಾಗಿ | : | ಉತ್ತಮ ಮೋಪು, ಹಸಿರೆಲೆ ಗೊಬ್ಬರ |
| 11) ಸಪ್ತಪರ್ಣೆ, ಹಾಲೆ | : | ತೊಗಟೆ ಮದ್ದು, ಮರ ಸಾಧಾರಣ, ಪ್ಲೈವುಡ್, ಬೆಂಕಿಕಡ್ಡಿ, ಮಸಿ ಮಾಡಲು |
| 12) ತುಗ್ಗುಲಿ, ಚಿಗರೆ | : | ಘಟ್ಟಿ ಮೋಪು, ಉತ್ತಮ ಹಸುರೆಲೆ ಗೊಬ್ಬರ, ಎಲೆಯನ್ನು ಚ ಹುಡಿಗೆ ಕಲಬೆರಕೆ ಇದೆ. |
| 13) ಬಿಳಿ ಬಾಗಿ | : | ಉತ್ತಮ ಮರ, ಹಸಿರು ಗೊಬ್ಬರ |
| 14) ಅಜ್ಜನ ಪಟ್ಟಿ | : | ಹೃದಯ ರೋಗಕ್ಕೆ ಮದ್ದು, ಬೀಜ ಭೇದಿ ಮದ್ದು ತೊಗಟೆಯ ಹಾಲು ವಿಷ, ನಾರು ತೆಗೆಯಬಹುದು. |
| 15) ದೀವಿಗುಜ್ಜೆ | : | ತೊಗಟೆಯಿಂದ ಉತ್ತಮ ನಾರು ಸಿಗುತ್ತದೆ, ಕಾಯಿ ತಿನ್ನಲು |
| 16) ಹೆಬ್ಬುಹಲಸು | ) | ಎಲೆ ಮೇವು, ಕಾಯಿ / ಹಣ್ಣು ಆಹಾರ |
| 17) ವಾಟೆ ಹುಳಿ | ): | ಬಹು ಉಪಯೋಗಿ ಮರಗಳು |

18) ಹಲಸು ) ಬಹು ಉಪಯೋಗಿ

19) ಬೋದಿನೆ, ಬೋದೆ : ಬೇರು ಜ್ವರಕ್ಕೆ, ವಾತರೋಗಗಳಿಗೆ, ಎಲೆ ತಿನ್ನಲು, ಕಾಯಿಯಿಂದ ಹಳದಿ ಬಣ್ಣ

20) ಸರಳಿ, ಸಲ್ಲೆ, ವಾಲಕ : ಹಣ್ಣು ತಿನ್ನಬಹುದು, ಮರ ಮನೆ ಮಾಡು ಕೆಲಸಕ್ಕೆ

21) ಬಿಲ್ವಾರ, ಪುಳಿ ಬಾಗಿ : ಎಲೆ ಮೇವು, ಗೋಂದು-ತೊಗಟೆ ಗಾಯದಿಂದ, ತೊಗಟೆ ಮಾದಕ ಪಾನೀಯಕ್ಕೆ, ಮರ ಉತ್ತಮ

22) ಶತಮೂಲಿ, ಹಲವು ಮಕ್ಕಳ ತಾಯಿ : ಮದ್ದು - ಬಳ್ಳಿ, ಗಡ್ಡೆ

23) ಕಹಿಬೇವು : ಬಹು ಉಪಯೋಗಿ, ನಮ್ಮ ಊರಿನ ಬೀಜ ಮೊಳಕೆ ಬರುವುದಿಲ್ಲ (ಕ್ರಿಮಿ ಬಾಧೆಯಿಂದ)

24) ಮುಳ್ಳು ಬೂರುಗ : ಮರ ಬೆಂಕಿ ಕಡ್ಡಿಗೆ ಉತ್ತಮ, ಹತ್ತಿ ಕೋಡು ಒಡೆದು ಕೊಯಿಲಿಗೆ ಸಿಗುವುದಿಲ್ಲ

25) ಉದ್ದ ಕೋಡಿನ, ಮುಳ್ಳು ಇಲ್ಲದ ಬೂರುಗ : ಮರ ಕೀಲು ಮಟ್ಟದ್ದು, ಹತ್ತಿ, ಉತ್ತಮ, ಕೊಯಿಲಿಗೆ ಸಿಗುತ್ತದೆ

26) ಮಂದಾರ ಜಾತಿ :

27) ಮಂದಾರ ಜಾತಿ ) ಉತ್ತಮ ಮಕರಂದ, ಎಲೆ ಮೇವು, ಸಾಧಾರಣ ಮೋಪು.

28) ಮಂದಾರ ಜಾತಿ ): " " " " " "

29) ಅರಸಿನ ಮಂದಾರ ): ಉತ್ತಮ ಮಕರಂದ, ಎಲೆ ಮೇವು, ಸಾಧಾರಣ ಮೋಪು.

30) ಕೆಂಪು ಮಂದಾರ ): " " " " " "

31) ಮುಳ್ಳು ಬಿದಿರು, ಹೆಬ್ಬಿದಿರು : ಬೇಲಿ, ಮನೆ ಕಟ್ಟಲು, ಆಹಾರ

32) ಆಸಾನ, ಏಕದಿವಿ, ಗೋಜೆ : ಮರ ಸಾಧಾರಣ ಮೋಪು, ಎಲೆ ಮೇವು, ಹಣ್ಣು ತಿನ್ನಲು ಯೋಗ್ಯ, ತೊಗಟೆ ಕಷಾಯ, ವೈರಸ್ ನಿಯಂತ್ರಿಸುವ ಶಕ್ತಿ ಇದೆ.

33) ತಾಳೆ ಮರ : ಮರದ ಎಲ್ಲಾ ಭಾಗವು ಉಪಯೋಗಿ

